# ತ್ರಿವೇಣಿ ಕಾದಂಬರಿ ಸಾಹಿತ್ಯದಲ್ಲಿ ಸ್ತ್ರೀಪಾತ್ರದ ಭಿನ್ನ ನೆಲೆಗಳು



*ಹಂಪಿ ವಿಶ್ವವಿದ್ಯಾಲಯಕ್ಕೆ ಎಂ.ಫಿಲ್ ಪದವಿಗಾಗಿ ಸಲ್ಲಿಸಿದ*

## ನಿಬಂಧ




ಮಾರ್ಗದರ್ಶಕರು :

**ಡಾ. ಕೆ.ಆರ್. ಸಂಧ್ಯಾರೆಡ್ಡಿ**

'ಸಮಯಾ', 1044, 4ನೇ ಮುಖ್ಯರಸ್ತೆ, 8ನೇ ಅಡ್ಡರಸ್ತೆ,

ಶ್ರೀನಿವಾಸನಗರ, ಬೆಂಗಳೂರು–560 050






ಸಂಶೋಧನಾ ವಿದ್ಯಾರ್ಥಿ :

**ಜ್ಯೋತಿಲಕ್ಷ್ಮಿ ಹೆಚ್.**




**ಪ್ರೊ. ಕಿ.ರಂ. ನಾಗರಾಜ್**

**ನಿರ್ದೇಶಕರು, ಕಾವ್ಯ ಮಂಡಲ**

ಹಂಪಿ ಕನ್ನಡ ವಿಶ್ವವಿದ್ಯಾನಿಲಯದಿಂದ ಮಾನ್ಯತೆ ಪಡೆದಿದೆ.

೨೦೦೭

595

## ಮಾರ್ಗದರ್ಶಕರ ಪ್ರಮಾಣ ಪತ್ರ

595

**ಜ್ಯೋತಿಲಕ್ಷ್ಮಿ ಹೆಚ್.** ಇವರು **"ತ್ರಿವೇಣಿ ಕಾದಂಬರಿ ಸಾಹಿತ್ಯದಲ್ಲಿ ಸ್ತ್ರೀಪಾತ್ರದ ಭಿನ್ನ ನೆಲೆಗಳು"** ಎಂಬ ಶೀರ್ಷಿಕೆಯ ಈ ಎಂ.ಫಿಲ್ ನಿಬಂಧವನ್ನು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿರುತ್ತಾರೆ. ಹಂಪೆ ವಿಶ್ವವಿದ್ಯಾಲಯದ ಎಂ.ಫಿಲ್ ಪದವಿಗಾಗಿ ಸಲ್ಲಿಸುತ್ತಿರುವ ಪ್ರಸ್ತುತ ನಿಬಂಧವನ್ನು ಈ ಮೊದಲು ಬೇರೆ ಯಾವುದೇ ವಿಶ್ವವಿದ್ಯಾಲಯದ ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಈ ಮೂಲಕ ಪ್ರಮಾಣೀಕರಿಸುತ್ತೇನೆ.

ಕೆ.ಆರ್. ಸಂಧ್ಯಾ

ಮಾರ್ಗದರ್ಶಕರು

**ಡಾ. ಕೆ.ಆರ್. ಸಂಧ್ಯಾರೆಡ್ಡಿ**

'ಸಮಯಾ', 1044, 4ನೇ ಮುಖ್ಯರಸ್ತೆ,

8ನೇ ಅಡ್ಡರಸ್ತೆ, ಶ್ರೀನಿವಾಸನಗರ,

ಬೆಂಗಳೂರು–560 050

ದಿನಾಂಕ : 6. 8. 2007

ಸ್ಥಳ : ಬೆಂಗಳೂರು

**ಅಧ್ಯಯನ ಕೇಂದ್ರ :** ಕಾವ್ಯಮಂಡಲ,
೧೩/೮೫, ರಾಷ್ಟ್ರೀಯ ವಿದ್ಯಾಲಯ ರಸ್ತೆ, ಬಸವನಗುಡಿ,
ಬೆಂಗಳೂರು–೫೬೦ ೦೦೪.

# ಪರಿವಿಡಿ

ಅಧ್ಯಾಯ-೧

# ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ

ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಮಹಿಳೆಯರಿಂದ ರಚಿತವಾದ ಸಾಹಿತ್ಯಕ್ಕೆ ಗಟ್ಟಿಯಾದ ಆಧಾರ ಸಿಗುವುದು ಹನ್ನೆರಡನೆಯ ಶತಮಾನದ ವಚನಕಾರ್ತಿಯರಿಂದ, ವಚನಗಳ ರಚನೆಯ ಮೂಲಕ ತಮ್ಮ ಅನುಭವಗಳನ್ನು ಅನಾವರಣಗೊಳಿಸುವ ಮೂಲಕ ಕನ್ನಡ ಸಾಹಿತ್ಯ ಚರಿತ್ರೆಗೆ ಮಹಿಳಾ ಅಭಿವ್ಯಕ್ತಿಯ ಮೊದಲ ದಾಖಲುಗಳನ್ನು ಒದಗಿಸಿಕೊಟ್ಟರಾದರೂ ಸಹ ಅವರಲ್ಲಿ ಮಹಿಳಾ ಬದುಕಿನ ಸಂವೇದನೆಯ ಸಂಪೂರ್ಣ ಸ್ವರೂಪ ವ್ಯಕ್ತವಾಗಲಿಲ್ಲ.

೧೯ನೇ ಶತಮಾನದ ಉತ್ತರಾರ್ಧದಿಂದ ಅನೇಕ ಲೇಖಕಿಯರು ಸಾಹಿತ್ಯ ರಚನೆಯಲ್ಲಿ ತೊಡಗಿದ್ದು ಕಾದಂಬರಿಗಳನ್ನು ಅವರ ಆತ್ಮಸಂವೇದನೆಯ ಮಾಧ್ಯಮವಾಗಿ ಬಳಸಿಕೊಂಡರು. ಈ ಕಾರ್ಯದಲ್ಲಿ ತಮ್ಮನ್ನು ತೀವ್ರವಾಗಿ ತೊಡಗಿಸಿಕೊಂಡವರಲ್ಲಿ ತ್ರಿವೇಣಿ ಪ್ರಮುಖರು. ಇವರ ಎಲ್ಲಾ ಕಾದಂಬರಿಗಳಲ್ಲಿಯೂ ಹೆಣ್ಣೇ ಕೇಂದ್ರ ಬಿಂದು. ಹೆಣ್ಣಿನ ಅಂತರ್ಮುಖದ ಭಿನ್ನ ಚಹರೆಯನ್ನು ಅವರ ಕಾದಂಬರಿಗಳ ಪ್ರತಿಯೊಂದು ಕೇಂದ್ರ ಪಾತ್ರದಲ್ಲಿ ಗುರುತಿಸಬಹುದಾಗಿದೆ. ತ್ರಿವೇಣಿಗಿಂತ ಮೊದಲು ಹಿರಿಯ ಲೇಖಕಿಯರು ಬರೆದರೂ ಕೂಡ ಅವರಲ್ಲಿ ಬಹುತೇಕವಾಗಿ ಪುರುಷ ನಿಯಂತ್ರಿತ ಸಮಾಜದಲ್ಲಿ ಒಪ್ಪಿತವಾದ ಮೌಲ್ಯಗಳನ್ನು ಒಪ್ಪಿ ಸಂಪ್ರದಾಯಿಕ ಚೌಕಟ್ಟಿನ ಒಳಗೇ ಉಳಿದರು.

ತ್ರಿವೇಣಿಯವರು ಪ್ರಗತಿಪರ ಧೋರಣೆಯನ್ನು ಅನುಸರಿಸಿ ಸ್ತ್ರೀ ಕೇಂದ್ರಿತ ದೃಷ್ಟಿಕೋನದಿಂದ ವಸ್ತುವನ್ನು ಮಂಡಿಸುವ ರೀತಿ, ಸ್ತ್ರೀಭಾವದಿಂದ ನೋಡುವ ನೋಟ ಸ್ತ್ರೀ ಮತ್ತು ಪುರುಷರ ಮಧ್ಯದ ದ್ವಿಮುಖ ನೀತಿಯನ್ನು ಗುರುತಿಸಿ ಹೆಣ್ಣಿನ ಸಮಸ್ಯೆಯ ಮೂಲಕ ಹುಡುಕುವ ಪ್ರಯತ್ನ ಮಾಡಿದರು.

ತ್ರಿವೇಣಿಯವರು ಸಮಾಜದ ವಿವಿಧ ವರ್ಗದ ವಿವಿಧ ವಯೋಮಾನದ ಹೆಣ್ಣುಗಳ ಆಂತರಿಕ ಮನಃಸ್ಥಿತಿಯನ್ನು ಸಹಜವಾಗಿ ಮೂಡಿಸಿದ್ದಾರೆ. ಅನುಭವಕ್ಕೆ ವಯಸ್ಸಿನ ಮಿತಿ ಇರುತ್ತದೆ ಎಂಬುದು ಸಾಮಾನ್ಯ ತಿಳುವಳಿಕೆ. ಆದರೆ ತ್ರಿವೇಣಿಯವರು ವಯಸ್ಸಿಗೂ ಮೀರಿದ ಅನುಭವಗಳನ್ನು ತಮ್ಮ ಕೇಂದ್ರ ಪಾತ್ರಗಳು ಹಾಗೂ ಇತರ ಪಾತ್ರಗಳ ಮೂಲಕವಾಗಿ ವ್ಯಕ್ತಪಡಿಸಿದ್ದಾರೆ. ಈ ಮುಖ್ಯ ಪಾತ್ರಗಳು ಸಮಸ್ಯೆಯ ಮಧ್ಯೆ

ಸಂದರ್ಭದ ಸುಳಿಗೆ ಸಿಕ್ಕಿ ಮುಳುಗದೆ ತಮ್ಮ ಅಸ್ತಿತ್ವವನ್ನು ಉಳಿಸಿಕೊಳ್ಳಲು ಭಿನ್ನ ಸಂದರ್ಭಗಳಲ್ಲಿ ಪರಿಹಾರಗಳನ್ನು ಹೇಗೆ ಕಂಡುಕೊಂಡಿವೆ ಎಂಬುದನ್ನು ವಿಶ್ಲೇಷಿಸುವುದರ ಮೂಲಕ ಪಾತ್ರದ ವೈಶಿಷ್ಟ್ಯತೆಯನ್ನು ಗುರುತಿಸುವುದು ಈ ಅಧ್ಯಯನದ ಮುಖ್ಯ ಉದ್ದೇಶ.

ತ್ರಿವೇಣಿಯವರ ಸಾಹಿತ್ಯವನ್ನು ನಾನು ಅಧ್ಯಯನಕ್ಕೆ ಆಯ್ಕೆ ಮಾಡಿಕೊಳ್ಳಲು ಕಾರಣವೂ ಇದೆ. ತ್ರಿವೇಣಿಯವರ ಕಾದಂಬರಿಗಳು ರಚನೆಯಾಗಿ ಸುಮಾರು ಐವತ್ತು ವರ್ಷಗಳಾದರೂ ಬದಲಾದ ಆಧುನಿಕ ಕಾಲದಲ್ಲೂ ಸ್ತ್ರೀಯರ ಪರಿಸ್ಥಿತಿಯಲ್ಲಿ ಹೆಚ್ಚಿನ ವ್ಯತ್ಯಾಸವೇನೂ ಆದಂತಿಲ್ಲ. ಸಂಪ್ರದಾಯಿಕ ಹಾಗೂ ಆಧುನಿಕತೆ ಈ ಎರಡರ ನಡುವೆ ಒಂದು ರೀತಿಯ ಸಂದಿಗ್ಧತೆಯ ಪರಿಸ್ಥಿತಿಯಲ್ಲಿ ಬದುಕುತ್ತಿದ್ದಾರೆ. ಇಂಥ ವೈರುಧ್ಯಗಳಿಗೆ ಸರ್ವಕಾಲಿಕ ಪರಿಹಾರ ಮಾರ್ಗಗಳನ್ನು ತ್ರಿವೇಣಿ ಕಾದಂಬರಿಗಳಲ್ಲಿ ವ್ಯಕ್ತವಾಗಿವೆ.

ಹೆಣ್ಣಿನ ವಾಸ್ತವ ಚಿತ್ರಣ, ದ್ವಿಮುಖ ನೀತಿಯನ್ನು ಕುರಿತ ವಿರೋಧವನ್ನು ಮನೋವಿಶ್ಲೇಷಣ ಸಿದ್ಧಾಂತದ ಹಿನ್ನೆಲೆಯಲ್ಲಿ ಮೂಡಿಬಂದ ಉದಾರವಾದಿ ನೆಲೆ, ಮಹಿಳೆಗೆ ವಿದ್ಯೆಯ ಅಗತ್ಯದ ಪ್ರತಿಪಾದನೆ, ಸಂಕ್ರಮಣಕಾಲದ ಮಹಿಳೆಯರ ವಿವಿಧ ಸಮಸ್ಯೆಗಳನ್ನು ಕುರಿತ ಕಾಳಜಿ, ಸಾಂಪ್ರದಾಯಿಕ ಜೀವನ ವ್ಯವಸ್ಥೆಯಲ್ಲಿನ ಮಹಿಳೆಯರ ಬದುಕಿನ ಕೆಲವು ವಿಶಿಷ್ಟ ಮುಖಗಳತ್ತ ಚೆಲ್ಲಿದ ಬೆಳಕು, ಮಹಿಳೆಯರಿಗೆ ಸಂಬಂಧಿಸಿದಂತೆ ಸಾಮಾಜಿಕ, ಕೌಟುಂಬಿಕ ವಲಯಗಳಲ್ಲಿನ ಅನೇಕ ಜೀವವಿರೋಧಿ ನಿಲುವುಗಳನ್ನು ಕುರಿತು ಪ್ರತಿಭಟನೆ, ಮಹಿಳೆಯರ ವಿಶಿಷ್ಟ ಜೀವನ ಸಂದರ್ಭ ಮತ್ತು ಅನುಭವಗಳ ದರ್ಶನ ಇಂಥ ಅನೇಕ ಅಂಶಗಳನ್ನು ತ್ರಿವೇಣಿಯವರ ಸಾಹಿತ್ಯ ತನ್ನೊಡಲಿನಲ್ಲಿ ಮೈಗೂಡಿಸಿಕೊಂಡಿದೆ.

ಹೀಗಾಗಿ ಮಹಿಳಾ ಸಾಹಿತ್ಯದಲ್ಲಿ ತ್ರಿವೇಣಿಯವರ ಸಾಹಿತ್ಯಕ್ಕೆ ಚಾರಿತ್ರಿಕ ಮಹತ್ವವಿರುವುದನ್ನು ಗುರುತಿಸುವ ಅಗತ್ಯವಿದೆ. ಇದು ಕೂಡ ನನ್ನ ಆಯ್ಕೆಗೆ ಮುಖ್ಯ ಕಾರಣ.

ತ್ರಿವೇಣಿಯವರು ಒಟ್ಟು ಇಪ್ಪತ್ತೊಂದು ಕಾದಂಬರಿಗಳನ್ನು ನಲವತ್ತೊಂದು ಸಣ್ಣ ಕತೆಗಳನ್ನು ಬರೆದಿದ್ದಾರೆ. ಆದರೆ ಇಲ್ಲಿ ಹೆಣ್ಣಿನ ವೈಶಿಷ್ಟ್ಯತೆಯ ನೆಲೆ ಗುರುತಿಸಲು ಅವರ ಕಾದಂಬರಿಗಳಿಗೆ ಮಾತ್ರ ನನ್ನ ಅಧ್ಯಯನವನ್ನು ಸೀಮಿತಗೊಳಿಸಿಕೊಂಡಿದ್ದು ಇವರ ಪ್ರಾತಿನಿಧಿಕ ಕಾದಂಬರಿಗಳನ್ನು ವಿಶೇಷವಾಗಿ ನಾಯಿಕ ಪ್ರಧಾನವಾದ ಕಾದಂಬರಿಗಳ ಕಡೆ ಹೆಚ್ಚು ಗಮನಿಸಿ ಅದಕ್ಕನುಗುಣವಾಗಿ ಐದು ಅಧ್ಯಾಯಗಳಲ್ಲಿ ಚರ್ಚಿಸಿದ್ದೇನೆ.

ಮೊದಲ ಅಧ್ಯಾಯದಲ್ಲಿ ನನ್ನ ಅಧ್ಯಯನದ ಉದ್ದೇಶವ್ಯಾಪ್ತಿಯ ಮಿತಿಯನ್ನು ತಿಳಿಸಿದ್ದೇನೆ.

ಎರಡನೆಯ ಅಧ್ಯಾಯದಲ್ಲಿ ತ್ರಿವೇಣಿಯವರ ಜೀವನ ಪರಿಚಯ ಹಾಗೂ ಅವರ ಕಾದಂಬರಿಗಳ ಸಂಕ್ಷಿಪ್ತ ಪರಿಚಯ, ಅವುಗಳ ವಸ್ತು, ಮುಖ್ಯ ಕಾಳಜಿಗಳ ಬಗ್ಗೆ ಪರಿಶೀಲಿಸಿದ್ದೇನೆ. ಅನಂತರ ಅವರ ಬರವಣಿಗೆಯ ವೈಶಿಷ್ಟ್ಯವನ್ನು ವಿಶ್ಲೇಷಿಸುವ ಪ್ರಯತ್ನ ಮಾಡಿದ್ದೇನೆ.

ಮೂರನೇ ಅಧ್ಯಾಯದಲ್ಲಿ ತ್ರಿವೇಣಿಯವರ ಮನೋ-ವೈಜ್ಞಾನಿಕ ಹಾಗೂ ಸಾಮಾಜಿಕ ಕಾದಂಬರಿಗಳಲ್ಲಿ ಸ್ತ್ರೀಪಾತ್ರಗಳನ್ನೂ ಪರಿಶೀಲಿಸಲಾಗಿದೆ. ತ್ರಿವೇಣಿಯವರ ಒಟ್ಟಾರೆ ಕಾದಂಬರಿಗಳಲ್ಲಿ ಸುಮಾರು ಮೂವತ್ತಕ್ಕೂ ಹೆಚ್ಚು ಪಾತ್ರಗಳು ಬರುತ್ತವೆ. ಅವುಗಳಲ್ಲಿ ಪ್ರಮುಖ ಪಾತ್ರಗಳು, ಅವರ ಕೌಟುಂಬಿಕ ಹಾಗೂ ಸಾಮಾಜಿಕ ಹಿನ್ನೆಲೆಯ ಪರಿಚಯವನ್ನು ಮಾಡಿಕೊಡಲಾಗಿದೆ.

ನಾಲ್ಕನೆಯ ಅಧ್ಯಾಯದಲ್ಲಿ ತ್ರಿವೇಣಿಯವರ ಸ್ತ್ರೀಪಾತ್ರಗಳ ವೈಶಿಷ್ಟ್ಯವನ್ನು ಕುರಿತಿದೆ. ಸಂಪ್ರದಾಯವೆಂಬ ಸಾಮಾಜಿಕ ಹಾಗೂ ಕೌಟುಂಬಿಕ ಹಿನ್ನೆಲೆಯಲ್ಲಿ ದ್ವಿಸ್ವರನ್ಯಾಯ ವ್ಯವಸ್ಥೆಗೆ ಬದ್ಧರಾದ ಹೆಣ್ಣುಗಳ ಬದುಕಿನ ದುರಂತಕ್ಕೆ ಸಮಾಜ ಹಾಗೂ ಈ ಪಾಕ್ಷಪಾತ ಧೋರಣೆಯೇ ಕಾರಣವೆಂಬುದನ್ನು ಪ್ರತಿಪಾದಿಸುವ ಹೆಣ್ಣುಗಳ ಇಲ್ಲಿದ್ದಾರೆ. ವೈಚಾರಿಕ ನಿಲುವನ್ನು ತಾಳುವ ಸಂಪ್ರದಾಯಿಕ ನಿಲುವುಗಳನ್ನು ಮೆಟ್ಟಿ ತಮ್ಮ ಅಸ್ತಿತ್ವದ ಉಳಿವಿಗಾಗಿ ಬೇರೆ ಬೇರೆ ಮಾರ್ಗಗಳಲ್ಲಿ ಬದುಕಿನ ನೆಲೆ ಕಂಡುಕೊಳ್ಳುವ ಪ್ರಗತಿಪರ ನಿಲುವುಗಳಿಗೆ ಮಾದರಿಯಾಗುವ ವಿಶಿಷ್ಟ ಹೆಣ್ಣುಗಳು ವಿಶ್ಲೇಷಣೆಯನ್ನು ಈ ಅಧ್ಯಾಯದಲ್ಲಿ ಮಾಡಲಾಗಿದೆ.

ಐದನೆಯ ಅಧ್ಯಾಯ ಉಪಸಂಹಾರ.

ಒಟ್ಟು ಐದು ಅಧ್ಯಾಯಗಳಲ್ಲಿ ನನ್ನ ಅಧ್ಯಯನದ ವಿಷಯವನ್ನು ಚರ್ಚಿಸಿದ್ದೇನೆ.

ಅಧ್ಯಾಯ–೨

# ತ್ರಿವೇಣಿಯವರ ಕಾದಂಬರಿ ಸಾಹಿತ್ಯ

'ತ್ರಿವೇಣಿ' ಕನ್ನಡ ಸಾಹಿತ್ಯ ಪರಂಪರೆಯಲ್ಲಿ ಎಂದೂ ಮರೆಯಲಾಗದ ಅಪರೂಪದ ವ್ಯಕ್ತಿತ್ವ. "ಮನುಷ್ಯ ಬದುಕಿದಷ್ಟು ದಿನಗಳಲ್ಲಿ ಏನನ್ನಾದರು ಸಾಧಿಸಬೇಕು, ಈ ಸಮಾಜಕ್ಕೆ ಒಳ್ಳೆಯದನ್ನು ಕೊಟ್ಟು ಹೋಗಬೇಕು" ಎಂಬ ಮಾತಿಗೆ ಮಾತು ಕೊಟ್ಟವರಂತೆ, ವಿಧಿಯ ಮರ್ಮ ಅರಿತವರಂತೆ, ದೇವರು ಕೊಟ್ಟ ಕಡಿಮೆ ಆಯಸ್ಸಿನಲ್ಲಿಯೇ ದಟ್ಟವಾದ ಜೀವನಾನುಭವದಿಂದ ತುಂಬಿದ ಕೃತಿಗಳನ್ನು ಕೊಟ್ಟು ನಮ್ಮೆಲ್ಲರ ಮನಸ್ಸಿನಲ್ಲಿ ಅಚ್ಚಳಿಯದ ಅವರ ವ್ಯಕ್ತಿತ್ವ ಚಿತ್ತವನ್ನು ಬಿತ್ತಿ ಹೋಗಿದ್ದಾರೆ.

೨೦ನೇ ಶತಮಾನದ ಅತ್ಯಂತ ಜನಪ್ರಿಯ ಕಾದಂಬರಿಕಾರ್ತಿ 'ತ್ರಿವೇಣಿ' ಕನ್ನಡದ ಸುಪ್ರಸಿದ್ಧ ಕಾದಂಬರಿಕಾರರ ತಮ್ಮ ಸಮಕಾಲೀನರಲ್ಲಿ ಅತ್ಯಂತ ಪ್ರತಿಭಾವಂತ ಲೇಖಕಿ ಎಂದು ಹೆಸರು ಪಡೆದರು. ಸುಮಾರು ೬೦ರ ದಶಕದ ಹಿಂದೆ ಲೇಖಕಿಯರು ಇನ್ನೂ ಕಾದಂಬರಿ ರಚನೆಗೆ ವಿಶೇಷವಾಗಿ ತೊಡಗದಿದ್ದ ಸಂದರ್ಭದಲ್ಲಿ ತ್ರಿವೇಣಿಯವರು ತಮ್ಮ ರಚನೆಗಳಿಂದ ಪ್ರಸಿದ್ಧರಾದರು. ಅವರು ನವೀನ ಪ್ರಜ್ಞೆಯನ್ನೊಳಗೊಂಡ ವಿಶಿಷ್ಟ ಕಾದಂಬರಿಗಳನ್ನು ಕನ್ನಡ ಸಾಹಿತ್ಯಕ್ಕೆ ಕೊಟ್ಟರು.

'ಕಾದಂಬರಿ' ಜೀವನಾನುಭವಗಳ ಪ್ರತಿಬಿಂಬ. ಆದ್ದರಿಂದ ತ್ರಿವೇಣಿಯವರ ಜೀವನ ಅನುಭವದಿಂದ ಮೂಡಿಬಂದ ಕಾದಂಬರಿ ಸಾಹಿತ್ಯವನ್ನು ತಿಳಿಯುವ ಮೊದಲು ಅವರ ಜೀವನದ ವಿವರಗಳನ್ನು ತಿಳಿಯುವ ಅಗತ್ಯವಿದೆ.

'ತ್ರಿವೇಣಿ'ಯವರು ಸಂಪ್ರದಾಯಸ್ಥ ಬ್ರಾಹ್ಮಣ ಮನೆತನದಲ್ಲಿ ಸೆಪ್ಟಂಬರ್ ೧, ೧೯೨೮ರಲ್ಲಿ ಮಂಡ್ಯದಲ್ಲಿ ಜನಿಸಿದರು. ಇವರ ತಂದೆ ಕನ್ನಡದ ಕುಲಗುರು ಬಿ.ಎಂ. ಶ್ರೀಕಂಠಯ್ಯನವರ ಸೋದರರಾದ ಬಿ.ಎಂ. ಕೃಷ್ಣಸ್ವಾಮಿ, ಇವರ ತಾಯಿ ತಂಗಮ್ಮ. ಇವರ ತಂದೆ ಮಂಡ್ಯದಲ್ಲಿ ವಕೀಲವೃತ್ತಿಯಲ್ಲಿದ್ದುದರಿಂದ ಇವರ ವಿದ್ಯಾಭ್ಯಾಸ ಮಂಡ್ಯ ಶಾಲೆಯೊಂದರಲ್ಲಿ ಆರಂಭವಾಯಿತು. ತ್ರಿವೇಣಿಯವರಿಗೆ ಮನೆಯಲ್ಲಿಟ್ಟ ಹೆಸರು ಭಾಗೀರಥಿ ಇವರು ಶಾಲೆಗೆ ಸೇರುವಾಗ ಭಾಗೀರಥಿಗೆ ಬದಲಾಗಿ 'ಅನುಸೂಯ' ಎಂದಾಯಿತು. ಮನೆಯಲ್ಲಿ ಎಲ್ಲರು ಮುದ್ದಿನಿಂದ 'ಅಂಚು' ಎಂದು ಕರೆಯುತ್ತಿದ್ದರು. ಮಂಡ್ಯದಲ್ಲಿ ಪ್ರಾಥಮಿಕ ಹಾಗೂ ಹೈಸ್ಕೂಲ್

ಶಿಕ್ಷಣವನ್ನು ಮುಗಿಸಿದರು. ನಂತರ ಮುಂದಿನ ಕಾಲೇಜು ವಿದ್ಯಾಭ್ಯಾಸಕ್ಕಾಗಿ ಮೈಸೂರಿಗೆ ಬಂದು ಅಲ್ಲಿ ತಮ್ಮ ಅಜ್ಜನ ಮನೆಯಲ್ಲಿ ಉಳಿದು ಮೈಸೂರಿನ ಸುಪ್ರಸಿದ್ಧ ಮಹಾರಾಜ ಕಾಲೇಜಿನಲ್ಲಿ ಪ್ರವೇಶ ಪಡೆದರು. 'ಮನಃಶಾಸ್ತ್ರ'ವನ್ನು ಐಚ್ಛಿಕ ವಿಷಯವಾಗಿ ಆಯ್ಕೆ ಮಾಡಿಕೊಂಡು ೧೯೪೭ರಲ್ಲಿ ಬಿ.ಎ. ಪದವಿ ಪಡೆದರು. ಪ್ರತಿಭಾವಂತೆಯಾದ ತ್ರಿವೇಣಿ ಸಿದ್ದೇಗೌಡ ಚಿನ್ನದ ಪದಕ ಹಾಗೂ ತಾತಯ್ಯ ಕ್ಯಾಶ್ ಬಹುಮಾನವನ್ನು ತಮ್ಮದಾಗಿಸಿಕೊಂಡರು.

ಪದವಿ ವಿದ್ಯಾಭ್ಯಾಸ ಮುಗಿಸಿ ಮಂಡ್ಯದಲ್ಲಿ ಪ್ರಾಥಮಿಕ ಶಾಲೆಯೊಂದರಲ್ಲಿ ಶಿಕ್ಷಕಿಯಾಗಿ ಸೇರಿಕೊಂಡರು. ಒಂದು ವರ್ಷ ಕೆಲಸ ನಿರ್ವಹಿಸಿ ಅನಾರೋಗ್ಯದ ಕಾರಣದಿಂದ ಅನಿವಾರ್ಯವಾಗಿ ಶಿಕ್ಷಕಿ ವೃತ್ತಿಯನ್ನು ಬಿಟ್ಟರು. ಅನಂತರ ಅನುಸೂಯ ತಮ್ಮ ತಾಯಿ ಕಡೆಯ ಸಂಬಂಧಿ, ಕಾಲೇಜು ಸಹಪಾಠಿಯಾದ ಎಸ್.ಎನ್. ಶಂಕರ್‌ರವರನ್ನು ೧೯೫೧ರಲ್ಲಿ ಮದುವೆಯಾಗಿ 'ಅನುಸೂಯ ಶಂಕರ್' ಆದರು. ಆರಂಭದಲ್ಲಿ ಶಂಕರ್ ಅವರ ತಂದೆತಾಯಿಗಳಿಗೆ ತಮ್ಮ ಮಗ ದೈಹಿಕ ಆರೋಗ್ಯ ದೃಢವಿಲ್ಲದ ಅವರಿಗಿಂತ ಒಂದೂವರೆ ವರ್ಷ ಮಾತ್ರ ಚಿಕ್ಕವಳಾಗಿದ್ದ ಅನುಸೂಯರನ್ನು ವಿವಾಹವಾಗುವುದರ ಬಗ್ಗೆ ಅಸಮಾಧಾನವಿತ್ತು. ಆದರೆ ಅನುಸೂಯರನ್ನು ಅರ್ಥಮಾಡಿಕೊಂಡಿದ್ದ ಶಂಕರ್ ಅವರನ್ನೇ ವಿವಾಹವಾಗುವ ದೃಢ ನಿರ್ಧಾರ ಮಾಡಿ ತಂದೆ-ತಾಯಿಗಳನ್ನು ಒಲಿಸಿಕೊಂಡರು. ವಿವಾಹದ ನಂತರ ಅನುಸೂಯರ ಸದ್ಗುಣ, ವಿನಯವಂತಿಕೆ, ಪ್ರೀತಿಯ ನಡವಳಿಕೆಯಿಂದ ತಮ್ಮ ಅತ್ತೆಮಾವರ ವಿಶ್ವಾಸ, ಪ್ರೀತಿ ಸಂಪಾದಿಸಿದರು. ಶಂಕರ್‌ರವರು ಮೈಸೂರಿನ ಶಾರದ ವಿಲಾಸ ಕಾಲೇಜಿನಲ್ಲಿ ಇಂಗ್ಲಿಷ್ ಅಧ್ಯಾಪಕರಾದುದರಿಂದ ಮೈಸೂರಿನಲ್ಲಿ ದಂಪತಿಗಳು ನೆಲೆಸಿದರು.

ಪದವೀಧರೆಯಾದ ತ್ರಿವೇಣಿ ಸ್ವತಃ ಪ್ರತಿಭಾವಂತೆಯಾಗಿದ್ದರೂ ಅವರ ವಿನಯ ಪ್ರವೃತ್ತಿ, ಹಿಂಜರಿಕೆಯ ಸ್ವಭಾವದಿಂದ ಅವರ ಪ್ರತಿಭೆ ಬೂದಿ ಮುಚ್ಚಿದ ಕೆಂಡದಂತಾಗಿತ್ತು. ಆದರೆ ಇಂಗ್ಲಿಷ್ ಪ್ರಾಧ್ಯಾಪಕರದ ಶಂಕರ್‌ರವರು ತ್ರಿವೇಣಿಯವರ ಬರವಣಿಗೆಗೆ ಅನೇಕ ರೀತಿಯಲ್ಲಿ ನೆರವಾದರು. ಬರವಣಿಗೆಗೆ ಉತ್ತೇಜನ, ಸೂಕ್ತ ಸಲಹೆ, ಬರೆದುದರ ಬಗ್ಗೆ ವಿಮರ್ಶೆ, ಸಾಕಷ್ಟು ಚರ್ಚೆ ಇವೆಲ್ಲಾ ತ್ರಿವೇಣಿಯವರಿಗೆ ತಮ್ಮ ಪತಿಯಿಂದ ದೊರೆಕಿತು. ಹೀಗೆ ಸತತ ಪ್ರೋತ್ಸಾಹ, ಉತ್ಸಾಹಗಳನ್ನು ನೀಡುತ್ತಾ ಸದಾ ಅವರ ಜೊತೆಗಿದ್ದರು.

ತ್ರಿವೇಣಿಯವರನ್ನು ಕಂಡವರು ಹೇಳುವಂತೆ ನೋಡಲು ಆಕರ್ಷಕವಾಗಿದ್ದರು, ಕೋಲು ಮುಖ, ಉದ್ದನೆಯ ಮೂಗು, ಹೊಳೆಯುವ ಬೊಗಸೆ ಕಣ್ಣುಗಳು, ಸಾಧಾರಣ ಎತ್ತರದ ಆಕರ್ಷಕ ಮೈಕಟ್ಟು, ಉದ್ದನೆಯ ಕಪ್ಪುಗೂದಲಿನಿಂದ ತಮ್ಮ ಗೆಳತಿಯರನ್ನು ಆಕರ್ಷಿಸುತ್ತಿದ್ದರು. ಸದಾ ಮೃದು ಮಂದಹಾಸ

ಬೀರುವ ಮುಖ, ಸರಳತೆ, ಗಂಭೀರೆ, ವಿನಯಶೀಲೆ, ಸಂಭಾಷಣಾಪ್ರಿಯೆ ಹಾಗೂ ಚುರುಕುಬುದ್ಧಿಯ ತ್ರಿವೇಣಿಯವರ ಮಾತುಗಾರಿಕೆಯಲ್ಲಿ ಮೊನಚಾದ ಹಾಸ್ಯ ಹೊರಹೊಮ್ಮುತ್ತಿತ್ತು.

ತ್ರಿವೇಣಿಯವರ ಹವ್ಯಾಸ ಆಸಕ್ತಿಯನ್ನು ತಿಳಿಯುವುದಾದರೆ ಅವರಿಗೆ ಸಂಗೀತ, ಭಕ್ತಿಗೀತೆಗಳಲ್ಲಿ ಹೆಚ್ಚು ಆಸಕ್ತಿ. ಉತ್ತಮರಾದ ಇಂಗ್ಲಿಷ್, ಕನ್ನಡ, ಬಂಗಾಳಿ ಮತ್ತು ಹಿಂದಿ ಭಾಷೆಗಳ ಕಾದಂಬರಿಗಳನ್ನು ಹೆಚ್ಚು ಮೆಚ್ಚುಗೆಯಿಂದ ಓದುತ್ತಿದ್ದರು. ಉತ್ತಮವಾದ ಇಂಗ್ಲಿಷ್, ಬಂಗಾಳಿ ಮತ್ತು ಕನ್ನಡ ಚಿತ್ರಗಳನ್ನು ನೋಡುವ ಅಭ್ಯಾಸವಿತ್ತು. ವೇದಿಕೆಯ ಮೇಲೆ ನಿಂತು ಭಾಷಣ ಮಾಡುವುದು, ನಾಟಕಗಳಲ್ಲಿ ಅಭಿನಯಿಸುವುದೆಂದರೆ ಅವರಿಗೆ ಬಹಳ ಭಯವಾಗುತ್ತಿತ್ತು. "ನಾನು ಎಷ್ಟು ಪುಟಗಳನ್ನಾದರೂ ಬರೀತೀನಿ, ನನಗೆ ಮಾತಾಡಲು ಹೆದರಿಕೆ" ಎಂದು ಹೇಳುತ್ತಿದ್ದರಂತೆ. ಕ್ರಮೇಣ ಈ ಭಯ ಕಡಿಮೆಯಾಗಿ, ಅವರು ಸಾಹಿತ್ಯ ಸಮ್ಮೇಳನದ ಮಹಿಳಾಗೋಷ್ಠಿಯಲ್ಲಿ ಭಾಗವಹಿಸಿದರು. ಸಮಾಜ ಹಾಗೂ ಸಾಹಿತ್ಯಗಳಲ್ಲಿ ಸ್ತ್ರೀಯ ಸ್ಥಾನಮಾನಗಳನ್ನು ಕುರಿತು ವಿಚಾರಗೋಷ್ಠಿಗಳಲ್ಲಿ ಭಾಗವಹಿಸುತ್ತಿದ್ದರು. ತ್ರಿವೇಣಿಯವರಿಗೆ ಪ್ರವಾಸ ಮಾಡುವುದೆಂದರೆ ಬಹಳ ಇಷ್ಟವಾಗಿತ್ತು. ಅವರ ಪತಿಯೊಂದಿಗೆ ಕರ್ನಾಟಕ ಹಾಗೂ ಭಾರತದ ಪ್ರಮುಖ ಸ್ಥಳಗಳಲ್ಲಿ ಸುತ್ತಾಡಿದರು. ಹೊಸ ಹೊಸ ಅನುಭವಗಳನ್ನು ಪಡೆದು ಅದನ್ನು ತಮ್ಮ ಕಾದಂಬರಿಗಳಲ್ಲಿ ಮೂಡಿಸಲು ಪ್ರಯತ್ನಿಸಿದ್ದಾರೆ. ಕೆಲವು ಸ್ಥಳಗಳ ವರ್ಣನೆಯನ್ನು ಕೆಲವು ಕಾದಂಬರಿಗಳಲ್ಲಿ ಕಾಣಬಹುದು. ತ್ರಿವೇಣಿಯವರಿಗೆ ಜೀವನದಲ್ಲಿ ಒಮ್ಮೆ ವಿದೇಶಿ ಪ್ರವಾಸ ಮಾಡಿ ತಮ್ಮ ಅನುಭವವನ್ನು ಹೆಚ್ಚಿಸಿಕೊಳ್ಳುವ ಆಸೆ ಇತ್ತು. ಆದರೆ ಅವರ ಅನಾರೋಗ್ಯದ ಕಾರಣ ಈ ಆಸೆ ಹಾಗೆಯೇ ಉಳಿಯಿತು.

ಸುಂದರ ಜೀವನಕ್ಕೊಂದು ಅಪಸ್ವರದಂತೆ ತ್ರಿವೇಣಿಯವರಿಗೆ ಎಲ್ಲಾ ಸುಖವಿದ್ದರೂ ಅದನ್ನು ಅನುಭವಿಸಲು ಉತ್ತಮ ಆರೋಗ್ಯವಿರಲಿಲ್ಲ. ಇವರಿಗೆ ಬಾಲ್ಯದಿಂದ ಬಾಳಿನ ಅಂತ್ಯದವರೆಗೂ ಉಬ್ಬಸರೋಗ ಕಾಡುತ್ತಿತ್ತು. ಇದರಿಂದಾಗಿ ಅವರು ಸ್ನೇಹಜೀವಿಯಾಗಿದ್ದರೂ ಇತರರೊಂದಿಗೆ ಬೆರೆಯದೆ ಏಕಾಂಗಿಯಾಗಿರುವಂತೆ ಮಾಡಿತ್ತು. ತಾವು ಅನುಭವಿಸಿದ ಈ ರೋಗದ ಯಾತನೆ, ನೋವು, ಸಂಕಟಗಳನ್ನು ಅವರ ಕಥೆಯ ಒಂದು ಪಾತ್ರದಲ್ಲಿ ವ್ಯಕ್ತಪಡಿಸುತ್ತಾರೆ. "ರಾತ್ರಿ ತಲೆದಿಂಬಿಗೆ ತಲೆಯಿಟ್ಟು ಸುಖವಾಗಿ ನಿದ್ರಿಸುವವರು ಎಷ್ಟು ಸುಖಿಗಳು" ಎಂದು ತಾವು ಉಬ್ಬಸ ಯಾತನೆಯಿಂದ ಅನುಭವಿಸಿದ ನಿದ್ದೆ ಇಲ್ಲದ ರಾತ್ರಿಗಳ ದುಃಸ್ಥಿತಿಯನ್ನು ಪಾತ್ರದ ಮೂಲಕ ಹೇಳಿಕೊಂಡಿದ್ದಾರೆ. ಇದರ ಜೊತೆಗೆ ನೆಗಡಿಯೂ ಸದಾ ಕಾಲ ಅವರನ್ನು ಕಾಡುತ್ತಿತ್ತು. "ನನಗೆ ಮೂಗು ಒಣಗಿದ ದಿನವೇ ಜ್ಞಾಪಕವಿಲ್ಲ" ಎಂದು ಅವರು ಮತ್ತೊಂದು ಪಾತ್ರ ಹೇಳುತ್ತವೆ.

ತ್ರಿವೇಣಿಯವರು ತಮ್ಮ ದುರ್ಬಲ ಅನಾರೋಗ್ಯದ ಕಾರಣದಿಂದಾಗಿಯೇ ಶಾಲಾ ಕಾಲೇಜುಗಳ ದಿನಗಳಲ್ಲಿ ಆಟಪಾಠಗಳಲ್ಲಿ ಭಾಗವಹಿಸಲು ಸಾಧ್ಯವಾಗುತ್ತಿರಲಿಲ್ಲ. ಸಹಜವಾಗಿಯೇ ದೈಹಿಕ ಆಯಾಸವಿಲ್ಲದ ಓದಿನಲ್ಲಿ ಹೆಚ್ಚು ಆಸಕ್ತಿ ಬೆಳೆಸಿಕೊಂಡರು. ಭಾವಜೀವಿಯಾದ ಇವರು ಅಂತರ್ಮುಖಿಯಾಗಿ ತಮಗೆ ಬೇಕಾದ ತೃಪ್ತಿ ಮತ್ತು ಸಾಹಚರ್ಯವನ್ನು ಪುಸ್ತಕಗಳಿಂದ ಪಡೆಯುತ್ತಿದ್ದರು. ಈ ರೀತಿಯ ಪುಸ್ತಕದ ಸಹವಾಸ ಅವರಲ್ಲಿ ಅಡಗಿದ್ದ ಸುಪ್ತಪ್ರತಿಭೆಯನ್ನು ಹೊರಗೆಡವಲು ಸಾಧ್ಯವಾಯಿತು. ತ್ರಿವೇಣಿ ತಮ್ಮ ಜೀವನದಲ್ಲಿ ಅನುಭವಿಸಿದ ನೋವು–ನಲಿವು, ಅಶಕ್ತಿ–ಅಭಿರುಚಿ, ಇಷ್ಟ–ಕಷ್ಟಗಳು, ಒಲವು–ನಿಲುವುಗಳನ್ನು, ತಮ್ಮ ಕೃತಿಗಳಲ್ಲಿ ವ್ಯಕ್ತಪಡಿಸಿದ್ದಾರೆ.

ಅನುಸೂಯ ಶಂಕರ್ 'ತ್ರಿವೇಣಿ'ಯಾದ ಬಗೆಗೆ ಕೆಲವು ಕುತೂಹಲಕಾರಿ ಹೇಳಿಕೆಗಳಿವೆ. ತ್ರಿವೇಣಿಯವರ ಆತ್ಮೀಯ ಸ್ನೇಹಿತೆ ಹಾಗೂ ಕನ್ನಡದ ಹೆಸರಾಂತ ಲೇಖಕಿ ಎಂ.ಕೆ. ಇಂದಿರಾ ಅವರು ತ್ರಿವೇಣಿ ಎಂಬ ಕಾವ್ಯನಾಮ ಆಯ್ಕೆಮಾಡಿಕೊಟ್ಟರೆಂಬುದು ಒಂದು ಮಾತು. ಇನ್ನೊಂದು ಹೇಳಿಕೆ ತ್ರಿವೇಣಿಯವರ ತಾಯಿ ತಂಗಮ್ಮ ಹೇಳುವಂತೆ ಅವರ ಮಗಳಿಗೆ ತುಂಬಾ ಸೊಂಪಾದ ಉದ್ದ ಕೂದಲು ಇದ್ದುದರಿಂದ ಅವಳ ಗೆಳತಿಯರು "ನೀನು ಎರಡಲ್ಲ ಮೂರು ಜಡೆ ಹಾಕಿಕೊಳ್ಳಬೇಕು" ಎಂದು ರೇಗಿಸುತ್ತಿದ್ದರಂತೆ ಹಾಗಾಗಿ 'ತ್ರಿವೇಣಿ' ಎಂಬ ಹೆಸರು ಬಂದಿದೆ ಎಂಬುದು ಮತ್ತೊಂದು ಹೇಳಿಕೆ ಹಾಗೆ ತ್ರೀವೇಣಿಯವರ ಪತ್ರವೊಂದರಲ್ಲಿ ದೊರೆತ ಆಶ್ಚರ್ಯಕಾರಿ ಸಂಗತಿ ಎಂದರೆ ಅವರ ಕಾವ್ಯನಾಮ ಕುರಿತು ಹೀಗೆ ಹೇಳಿದ್ದಾರೆ. "ಮಹಾತ್ಮಗಾಂಧಿಯವರ ಅಸ್ಥಿಯನ್ನು ತ್ರಿವೇಣಿ ಸಂಗಮದಲ್ಲಿ ಕದಡಿದರೆಂದು ಹಲವಾರು ಬಾರಿ ಪತ್ರಿಕೆಗಳಲ್ಲಿ ನೋಡಿದಾಗ ನನಗೆ ಆ ಹೆಸರಿನಲ್ಲಿ ಏನೋ ಒಂದು ಬಗೆಯ ಆಕರ್ಷಣೆ ಇದ್ದಂತೆ ತೋರಿತು. ನಾನು ಆಗ ತಾನೆ ಸಣ್ಣಕತೆಗಳನ್ನು ಬರೆಯಲು ಪ್ರಾರಂಭ ಮಾಡಿದ್ದೆ ಕತೆ ಬರೆಯುವವರೆಲ್ಲ ಕಾವ್ಯನಾಮ ಇರಿಸಿಕೊಳ್ಳಲೇಬೇಕೆಂದು ಭಾವಿಸಿದ್ದ ಕಾಲವದು. ಆಗ ನನ್ನ ಹೆಸರನ್ನು ಮರೆಸಿ 'ತ್ರಿವೇಣಿ' ಎಂಬ ಹೆಸರಿನಿಂದ ಬರೆಯಲು ಪ್ರಾರಂಭ ಮಾಡಿದೆ. ಆದರೆ ಈಗ ನನ್ನ ಹೆಸರೇ ಇದ್ದಿದ್ದರೆ ಚೆನ್ನಾಗಿತ್ತು ಎನಿಸುತ್ತದೆ. ಕಾರ್ಯ ಕೈ ಮೀರಿ ಹೋಗಿದೆ." ಎಂದು ತ್ರಿವೇಣಿಯವರೇ ಶ್ರೀ ಸುಬ್ರಹ್ಮಣ್ಯಂ ಅವರಿಗೆ ಆಗಸ್ಟ್ ೧, ೧೯೫೭ರಲ್ಲಿ ಬರೆದ ಪತ್ರದಲ್ಲಿ ಹೇಳಿಕೊಂಡಿದ್ದಾರೆ.

ತ್ರಿವೇಣಿಯವರಿಗೆ ಸಾಹಿತ್ಯಾಭಿರುಚಿ ಬೆಳೆದು ಬಂದ ಬಗ್ಗೆ ತಿಳಿಯ ಹೋದರೆ ತ್ರಿವೇಣಿ ಹುಟ್ಟಿ ಬೆಳೆದ ವಾತಾವರಣವೇ ಸಾಹಿತ್ಯ ಸೌರಭದಿಂದ ತುಂಬಿತ್ತು, ಅದು ರಕ್ತಗತವಾಗಿಯೂ ಬಂದಿರಬೇಕು. ಹೆಸರಾಂತ

ಸಾಹಿತಿ ಆಚಾರ್ಯ ಬಿ.ಎಂ. ಶ್ರೀಕಂಠಯ್ಯ ತ್ರಿವೇಣಿಯವರ ದೊಡ್ಡಪ್ಪ, ಲೇಖಿಕಿ ಶ್ರೀಮತಿ ವಾಣಿ ಇವರ ಚಿಕ್ಕಮ್ಮ, ರಾಜಲಕ್ಷ್ಮಿ, ಎಸ್.ಆರ್. ಅಶ್ವತ್ಥ, ಬಿ.ಸಿ. ರಾಮಚಂದ್ರಶರ್ಮ, ಆರ್ಯಾಂಬ ಪಟ್ಟಾಭಿ ಇವರೆಲ್ಲ ತ್ರಿವೇಣಿಯವರ ಹತ್ತಿರದ ರಕ್ತಸಂಬಂಧಿಗಳು, ಹಾಗೆ ಎಂ.ಕೆ. ಇಂದಿರಾ, ಅನುಪಮಾ ನಿರಂಜನ, ಎಂ.ಸಿ. ಪದ್ಮಾ, ಎಂ.ಕೆ. ಜಯಲಕ್ಷ್ಮಿ, ಶರ್ವಾಣಿ, ಇವರೆಲ್ಲ ತ್ರಿವೇಣಿಯವರ ಆತ್ಮೀಯ ಗೆಳೆಯರಾಗಿದ್ದರು. ತ್ರಿವೇಣಿಯವರು ತಮ್ಮ ಗೆಳತಿಯರು ಹಾಗೂ ಬಂಧುಗಳೊಂದಿಗೆ ಅನೇಕ ವಿಷಯಗಳಲ್ಲಿ ಚರ್ಚಿಸುತ್ತಿದ್ದರು.

ತ್ರಿವೇಣಿಯವರ ಸಾಹಿತ್ಯ ಬರವಣಿಗೆ 'ಸಣ್ಣಕಥೆ'ಗಳನ್ನು ಬರೆಯುವ ಮೂಲಕ ತಮ್ಮ ಸಾಹಿತ್ಯಲೋಕವನ್ನು ಪ್ರವೇಶಿಸಿದರು. ಕೊಂಚ ಹಿಂಜರಿಕೆ ಸ್ವಭಾವದ ಇವರು ಪ್ರಾರಂಭದಲ್ಲಿ ಕಥೆಗಳನ್ನು ಬರೆದು ಅವುಗಳನ್ನು ಯಾರಿಗೂ ತೋರಿಸದೆ ಮುಚ್ಚಿಡುತ್ತಿದ್ದರು. ಮನೆಯಲ್ಲಿ ಆಕಸ್ಮಿಕವಾಗಿ ಆ ಕಥೆಗಳು ಅವರ ತಾಯಿಯ ಕೈಗೆ ಸಿಕ್ಕಿ ಅವರು ಅದನ್ನು ಓದಿ ಮೆಚ್ಚಿಕೊಂಡು ಪತ್ರಿಕೆಗಳಲ್ಲಿ ಪ್ರಕಟಣೆಗೆ ಕಳುಹಿಸಲು ಪ್ರೋತ್ಸಾಹಿಸಿದರು. ಅವು ಯಾವುದೇ ತೊಂದರೆ ಇಲ್ಲದೆ ವಾರ ಹಾಗೂ ಮಾಸಪತ್ರಿಕೆಗಳಲ್ಲಿ ಪ್ರಕಟವಾದವು. ಆ ಕಾಲದಲ್ಲಿ ಕಾದಂಬರಿ ಪ್ರಕಾರ ಹೆಚ್ಚು ಜನಪ್ರಿಯವಾಗಿದ್ದರಿಂದ ೧೯೫೪-೫೦ರ ನಡುವೆ 'ಅಪಸ್ವರ' ಕಾದಂಬರಿಯನ್ನು ಬರೆದರು. ಬರೆದದ್ದು ಸುಲಭ, ಆದರೆ ಅದನ್ನು ಪ್ರಕಟಿಸಲು ಅವರು ಪಟ್ಟ ಪಾಡು ಅಷ್ಟಿಷ್ಟಲ್ಲ. ಅವರಿಗುಂಟಾದ ನಿರಾಸೆ, ನಿರಾಸಕ್ತಿಗಳನ್ನು ಅವರೇ ಹೇಳಿಕೊಂಡಿದ್ದಾರೆ. "'ಹೂವು-ಹಣ್ಣು' ಕಾದಂಬರಿ ಮೊಟ್ಟ ಮೊದಲು ಅಚ್ಚಿನ ಮನೆ ಕಂಡರೂ ನಾನು ಮೊದಲು ಬರೆದ ಕಾದಂಬರಿ 'ಅಪಸ್ವರ' ಅದೇ ತಾನೆ ಹಲವಾರು ಸಣ್ಣಕತೆಗಳನ್ನು ಬರೆದು ಕಾದಂಬರಿಯಾದ 'ಅಪಸ್ವರ' ಮೊದಲು ಬರೆವೆ. ಬರೆದಿದ್ದೆ ತಡ, ಪ್ರಕಾಶಕರ ಬೇಟೆಗೆ ಮೊದಲಾಯಿತು. ನಾನು ಅದನ್ನು ೧೯೫೪-೫೦ನೇ ಇಸವಿಯಲ್ಲಿ ಬರೆದೆ. ಮೈಸೂರಿನ ಪ್ರಮುಖ ಪ್ರಕಾಶಕರೊಬ್ಬರ ಬಳಿ ನನ್ನ ಕಾದಂಬರಿ ಕಳಿಸಿದೆ. ಅವರು ಹಲವು ದಿನಗಳು ನನ್ನ ಹಸ್ತಪ್ರತಿಯನ್ನಿರಿಸಿಕೊಂಡು ನಂತರ ಯಾವ ಉತ್ತರವನ್ನು ಕೊಡದೆ ಹಸ್ತಪ್ರತಿಯನ್ನು ಹಿಂತಿರುಗಿಸಿದರು. ಆ ಮಾಲೆಯಿಂದ ಪ್ರಕಟವಾಗಿ ಬಂದಿದ್ದ ಪುಸ್ತಕಗಳಲ್ಲಿ ತುಂಬಾ ಅಭಿಮಾನವಿದ್ದ ನನಗೆ ತುಂಬಾ ನಿರಾಶೆಯಾಯಿತು. ನಂತರ ಬೆಂಗಳೂರಿನ ಹೆಸರುವಾಸಿಯಾಗಿದ್ದ ಮತ್ತೊಂದು ಮಾಲೆಗೆ ನನ್ನ ಹಸ್ತಪ್ರತಿಯನ್ನು ನಮ್ಮಿಬ್ಬರಿಗೂ ಪರಿಚಯವಿದ್ದವರ ಮೂಲಕ ಕಳಿಸಿದೆ. ಅವರು ಸುಮಾರು ಆರು ತಿಂಗಳ ಕಾಲ ನನ್ನ ಹಸ್ತಪ್ರತಿಯನ್ನಿರಿಸಿಕೊಂಡು ನಂತರ ನಾನೊಮ್ಮೆ ಒತ್ತಾಯವಾಗಿ ಹೇಳಿಕಳಿಸಿದ್ದರಿಂದ ಸಮಗ್ರ ಓದಲು ಸಮಯವಿಲ್ಲ ಎಂದು ಹೇಳಿ ಹಸ್ತಪ್ರತಿಯನ್ನು ಹಿಂತಿರುಗಿಸಿದರು. ನಂತರ ಹಸ್ತಪ್ರತಿ ಸುಮಾರು ಎರಡು

ವರ್ಷಗಳ ಕಾಲ ನನ್ನಲ್ಲಿತ್ತು. ಕೆಲವು ಸಾರಿ ಬೇಸರವಾಗಿ ಅದನ್ನು ಹರಿದು ಬಿಡೋಣವೆಂದು ಯೋಚಿಸಿದ್ದೂ ಉಂಟು" ಎಂದು ಸುಬ್ರಹ್ಮಣ್ಯಂ ಅವರಿಗೆ ಬರೆದ ಪತ್ರದಲ್ಲಿ ಹೇಳಿಕೊಂಡಿದ್ದಾರೆ. ಆದರೆ ಕೆಲವು ದಿನಗಳ ನಂತರ ಬೆಂಗಳೂರಿನ ವಾಹಿನಿ ಪ್ರಕಾಶನದವರಿಂದ ೧೯೫೩ರಲ್ಲಿ ಒಂದು ಹೊಸ ಅವಕಾಶ ಲಭ್ಯವಾಯಿತು. ಇವರು ಹಸ್ತಪ್ರತಿಗಳನ್ನು ಸಂಗ್ರಹಿಸಿ ಸಾಮಾನ್ಯ ಜನರಿಗೂ ಕೈಗೆಟುಕುವ ಬೆಲೆಯಲ್ಲಿ ಪುಸ್ತಕಗಳನ್ನು ಪ್ರಕಟಿಸುವ ಕಾರ್ಯಕ್ಕೆ ಕೈಹಾಕಿದರು. ಈ ಸಂದರ್ಭದಲ್ಲಿ ತ್ರಿವೇಣಿಯವರ ಕಾದಂಬರಿಯ ವಿಷಯ ತಿಳಿದು ಪ್ರಕಟಿಸಲು ಮುಂದೆ ಬಂದರು. ಪ್ರಕಟವಾದ ಕೆಲವೇ ದಿನಗಳಲ್ಲಿಯೇ ಕಾದಂಬರಿಯ ಎಲ್ಲಾ ಪ್ರತಿಗಳೂ ಶರವೇಗದಲ್ಲಿ ಮಾರಾಟಗೊಂಡವು. ಆದರೆ ಅನಂತರದಲ್ಲಿ ಇವರ ಮೂರನೆಯ ಕಾದಂಬರಿ 'ಸೋತು ಗೆದ್ದವಳು' ಕೂಡ ಬಹುದಿನಗಳಾದರು ಪ್ರಕಟಣೆಯನ್ನು ಕಾಣದೆ ಅಲೆದಾಡಿತು. ಆದರೆ ಅನಂತರದ ಅವರ ನಾಲ್ಕನೆಯ ಕಾದಂಬರಿ 'ಬೆಕ್ಕಿನ ಕಣ್ಣು' ಪರಿಸ್ಥಿತಿಯನ್ನೆ ಬದಲಾಯಿಸುವಷ್ಟು ಖ್ಯಾತಿ ಪಡೆಯಿತು. ಎಷ್ಟರ ಮಟ್ಟಿಗೆ ಜನಪ್ರಿಯವಾಯಿತೆಂದರೆ ಹಸ್ತಪ್ರತಿಗಾಗಿ ಪ್ರಕಾಶಕರೇ ಅವರ ಮನೆ ಬಾಗಿಲಿಗೆ ಅಲೆಯುವಂತಾಯಿತು. ತ್ರಿವೇಣಿಯವರೇ ಒಂದು ಸಂದರ್ಭದಲ್ಲಿ ಹೇಳಿಕೊಂಡಿರುವಂತೆ, ಪ್ರಕಾಶಕರ ಕೋರಿಕೆಗಳೆಲ್ಲವನ್ನು ಅವರು ಪೂರೈಸಿದ್ದರೆ, "ಹತ್ತು ವರ್ಷದ ಅವಧಿಯಲ್ಲಿ ಸುಮಾರು ೫೦ ಕಾದಂಬರಿಗಳನ್ನು ಅವರು ಬರೆಯಬೇಕಿತ್ತು" ಆದರೂ ಅನಾರೋಗ್ಯದ  ಮಧ್ಯೆಯು ಅವರು ೧೯೫೦-೬೩ರ ಅವಧಿಯಲ್ಲಿ ೨೦ ಕಾದಂಬರಿಗಳನ್ನು ಮತ್ತು ೪೧ ಸಣ್ಣ ಕತೆಗಳನ್ನು ಬರೆದರು. ಅವರು ಸಾವಿಗೆ ಹತ್ತಿರವಾಗುತ್ತಿದ್ದ ದಿನಗಳಲ್ಲಿಯೂ ಕೂಡ 'ಅವಳ ಮಗಳು' ಎಂಬ ಕಾದಂಬರಿ ಆರಂಭಿಸಿದ್ದರು. ಅದು ೬೦ ಪುಟಗಳ ಅಪೂರ್ಣ ಕಾದಂಬರಿ. ತ್ರಿವೇಣಿಯವರ ಸಾವಿನ ನಂತರ ಈ ಕಾದಂಬರಿಯನ್ನು ಲೇಖಕಿ ಎಂ.ಸಿ. ಪದ್ಮಾ ಪೂರ್ಣಗೊಳಿಸಿದರು. ಕೇವಲ ಹದಿಮೂರು ವರ್ಷಗಳಷ್ಟು ಕಡಿಮೆ ಅವಧಿಯಲ್ಲಿ ಅವರ ಸಾಹಿತ್ಯ ಸಾಧನೆ ಅಪಾರವಾದದ್ದು. "ಅವರು ಬರೆಯಲು ಕುಳಿತರೆ ಒಂದೇ ಸಮನೆ ಎಂಟು-ಹತ್ತು ಘಂಟೆಗಳ ಕಾಲ ಬರೆಯುತ್ತಿದ್ದರು. ಇಲ್ಲದಿದ್ದರೆ ಕೆಲವು ದಿನಗಳ ತನಕ ಏನನ್ನೂ ಬರೆಯುತ್ತಲೇ ಇರಲಿಲ್ಲ" ಎಂದು ಅವರ ಪತಿ ಸಂದರ್ಶ ಒಂದರಲ್ಲಿ ಹೇಳುತ್ತಾರೆ. ಇದರಿಂದ ಅವರ ತಲ್ಲೀನತೆಯು ಎಷ್ಟಿತ್ತೆಂಬುದನ್ನು ಊಹಿಸಬಹುದು.

ಇನ್ನು ಇವರ ಕೃತಿಗಳ ಯಶಸ್ಸಿನ ಬಗ್ಗೆ ಹೇಳುವುದಾದರೆ ಒಳ್ಳೆಯ ಕೃತಿಗಳು ಅನುವಾದವಾಗುತ್ತವೆ ಎಂಬ ಮಾತಿಗೆ ತ್ರಿವೇಣಿಯವರ ಕೃತಿಗಳು ಸಾಕ್ಷಿ. ತ್ರಿವೇಣಿಯವರ ಅನೇಕ ಕಾದಂಬರಿಗಳು ಹಾಗೂ ಸಣ್ಣ ಕಥೆಗಳು ಹಿಂದಿ, ತೆಲುಗು, ಇಂಗ್ಲಿಷ್ ಭಾಷೆಗಳಿಗೆ ಅನುವಾದಗೊಂಡವು. ಶರ್ವಾಣಿಯವರು 'ಬೆಕ್ಕಿನ ಕಣ್ಣು'

ಕಾದಂಬರಿಯನ್ನು ತೆಲುಗಿಗೆ ಅನುವಾದಿಸಿದರು. ಅದು ತೆಲುಗು ಹಾಗೂ ಮಲಯಾಳಿ ಭಾಷೆಗಳಲ್ಲಿ ಚಲನಚಿತ್ರವೂ ಆಗಿದೆ. ಎಸ್.ಎಂ. ರಾಮಚಂದ್ರಸ್ವಾಮಿಯವರು 'ಅಪಸ್ವರ' ಮತ್ತು 'ಅಪಜಯ' ಕಾದಂಬರಿಗಳನ್ನು ಮತ್ತು ಏಳು ಸಣ್ಣ ಕಥೆಗಳನ್ನು 'ತ್ರಿವೇಣಿಸಪ್ತಕ' ಎಂಬ ಹೆಸರಿನಲ್ಲಿ ಹಿಂದಿ ಭಾಷೆಗೆ ಅನುವಾದಿಸಿದ್ದಾರೆ. ಮೀರಾ ಸರ್ವೆಕರ್‌ರವರು ಶರಪಂಜರ ಕಾದಂಬರಿಯನ್ನು 'The Mad Woman' ಎಂಬ ಹೆಸರಿನಲ್ಲಿ ಇಂಗ್ಲಿಷ್ ಭಾಷೆಗೆ ಅನುವಾದಿಸಿದರು. ಉತ್ತಮ ಕೃತಿಗಳಿಗೆ ಯಾವ ಕಾಲದಲ್ಲೂ ಬೇಡಿಕೆ ಇರುತ್ತದೆ. ಅಂದಿನಿಂದ ಇಂದಿನವರೆಗೂ ಇವರ ಕಾದಂಬರಿಗಳು ಮತ್ತು ಸಣ್ಣ ಕಥಾಸಂಗ್ರಹಗಳು ಮತ್ತೆ ಮತ್ತೆ ಪುನರ್‌ಮುದ್ರಣವಾಗುತ್ತಿವೆ ಇದು ಅವರ ಕೃತಿಗಳ ಪ್ರಸ್ತುತತೆ ಹಾಗೂ ಮೌಲ್ಯಕ್ಕೆ ಸಾಕ್ಷಿ. ತ್ರಿವೇಣಿಯವರು ತಮ್ಮ ಕಾದಂಬರಿಗಳನ್ನು ಬೆಳ್ಳಿತೆರೆಯ ಮೇಲೆ ನೋಡುವ ಆಸೆ ಹೊಂದಿದ್ದರು. ಆದರೆ ಅವರು ಮರಣದ ನಂತರವೇ ಅವರ ಆಸೆ ಈಡೇರಿತು. ಬೆಳ್ಳಿಮೋಡ, ಹಣ್ಣೆಲೆ ಚಿಗುರಿದಾಗ, ಶರಪಂಜರ ಮತ್ತು ಕಂಕಣ ಈ ನಾಲ್ಕು ಕಾದಂಬರಿಗಳು ಕನ್ನಡ ಭಾಷೆಯಲ್ಲಿ ಚಲನಚಿತ್ರವಾಗಿವೆ. 'ಬೆಕ್ಕಿನ ಕಣ್ಣು' ಮತ್ತು 'ಕೀಲು ಗೊಂಬೆ' ಕಾದಂಬರಿಗಳು ನಾಟಕ ರೂಪದಲ್ಲಿ ಆಕಾಶವಾಣಿಯನ್ನು ಬಿತ್ತರಗೊಂಡಿವೆ. ತ್ರಿವೇಣಿಯವರ ಕೃತಿಗಳು ಸಾಹಿತ್ಯ ಕ್ಷೇತ್ರದಲ್ಲಿಯೇ ಅಲ್ಲದೆ ಮಾಧ್ಯಮಕ್ಷೇತ್ರದಲ್ಲೂ ತಮ್ಮದೇ ಆದ ಮಹತ್ವದ ಸ್ಥಾನವನ್ನು ಈಗಲೂ ಉಳಿಸಿಕೊಂಡಿವೆ.

ತ್ರಿವೇಣಿಯವರ ಸಂಸಾರಿಕ ಜೀವನ ಸುಂದರವಾಗಿತ್ತು. ಅವರ ಏಳಿಗೆಗೆ ಅವರ ಪತಿ ಬೆಂಗಾವಲಾಗಿದ್ದರು. ಅವರ ಸಂಸಾರದಲ್ಲಿ ನೆಮ್ಮದಿ, ಸಂತೋಷವಿತ್ತು ತಮ್ಮ ಸದ್ಗುಣಗಳಿಂದ ವಿನಯ ತುಂಬಿದ ಪ್ರೀತಿಯಿಂದ ಎಲ್ಲರ ಮನಸ್ಸನ್ನು ಸೆಳೆಯುತ್ತಿದ್ದರು. ಸುಖ ಸಂಸಾರಕ್ಕೊಂದು ಕಪ್ಪು ಚುಕ್ಕೆಯಂತೆ ಅವರಿಗೆ ಮಕ್ಕಳಿಲ್ಲದ ಕೊರತೆ ಅವರ ನೆಮ್ಮದಿಯನ್ನು ನುಂಗಿತ್ತು. ಅವರ ದುರ್ಬಲ ದೇಹಸ್ಥಿತಿ ಅನಾರೋಗ್ಯದ ಕಾರಣ ಅವರಿಗೆ ಮಕ್ಕಳನ್ನು ಹೆರುವ ಶಕ್ತಿ ಕುಗ್ಗಿತ್ತು. ಅವರ ಪತಿಗೆ ಹೆಂಡತಿಯ ಆರೋಗ್ಯಕ್ಕಿಂತ ಮಕ್ಕಳು ಹೆಚ್ಚಲ್ಲವೆನಿಸಿದರೂ ಮದುವೆಯಾದ ಹೆಣ್ಣಿಗೆ ಸಹಜವಾಗಿಯೇ ತಾಯಿತನದ ಹಂಬಲ ಉಂಟಾಗುವಂತೆ ಅದರಲ್ಲೂ ತ್ರಿವೇಣಿಯಂತ ಮಾತೃಹೃದಯದ, ಭಾವುಕ ಮನಸ್ಸು ಸದಾ ಮಗುವಿಗಾಗಿ ಕಾತರಿಸುವಂತೆ ಮಾಡಿತ್ತು. "ಇರುವುದೆಲ್ಲವ ಬಿಟ್ಟು ಇಲ್ಲದುದೆಡೆಗೆ ತುಡಿಯುತ್ತಿತ್ತು ಅವರ ಮನಸ್ಸು" ತಮ್ಮ ಅನಾರೋಗ್ಯವನ್ನು ಎದುರಿಸಿ ಒಂದು ಮಗುವನ್ನು ಪಡೆಯಲು ನಿರ್ಧರಿಸಿದರು. ಬಯಸಿ ಬಯಸಿ ಹಡೆದ ಮಗು ಹುಟ್ಟುವಾಗಲೇ ನಿರ್ಜೀವವಾಗಿ ಹುಟ್ಟಿತು. ಅದೇ ರೀತಿ ಇನ್ನೆರಡು ಮಕ್ಕಳು ಕೂಡ ಹೊಟ್ಟೆಯಲ್ಲಿ ಸತ್ತು

ಹುಟ್ಟಿದವು. ಈ ವಿಚಾರದಲ್ಲಿ ಅವರು ತುಂಬ ನೋವು ನಿರಾಶೆಗಳನ್ನು ಅನುಭವಿಸಿದರು. ಈ ನಿರಾಶೆ, ಕಾತರ, ನೋವು, ಸಂಕಟ ಹೆರಿಗೆಯ ಅನುಭವಗಳೆಲ್ಲವನ್ನು 'ಅತಿಥಿ ಬರಲಿಲ್ಲ' ಎಂಬ ಸಣ್ಣ ಕಥೆಯಲ್ಲಿ ಜೀವಂತವಾಗಿ ಮೂಡಿಸಿದ್ದಾರೆ. ಸೋತಷ್ಟು ಗೆಲ್ಲುವ, ಕೈಜಾರಿದಷ್ಟು ಹಿಡಿಯುವ ಛಲ ಹೆಚ್ಚಾಯಿತು. ತಾಯಿಯಾಗಲೇಬೇಕೆಂಬ ಹಠದಿಂದ ಮಗುವಿಗಾಗಿ ವಿಧಿಯೊಡನೆ ಹೋರಾಡಿದರು. ಮತ್ತೆ ಗರ್ಭಧರಿಸಿದರೆ ಅವರ ಜೀವಕ್ಕೆ ಅಪಾಯವಾಗುವುದು ಎಂದು ತಿಳಿದಿದ್ದರೂ ಮತ್ತೆ ತಾಯಿಯಾಗಲು ನಿರ್ಧರಿಸಿದರು. ಅವರ ತಾಯಿಯಾಗುವ ಬಯಕೆ ಅವರ ಜೀವಕ್ಕಿನ್ನ ಹೆಚ್ಚಾಗಿತ್ತು. ತಮ್ಮ ೩೫ನೇ ವಯಸ್ಸಿನಲ್ಲಿ ಒಂದು ಹೆಣ್ಣುಮಗುವಿಗೆ ಜನ್ಮ ಕೊಟ್ಟರು. ಪ್ರಸವವು ಸಹಜವಾಗಿ ಆಗದೆ ಕಷ್ಟವಾಗಿ ಶಸ್ತ್ರಚಿಕಿತ್ಸೆಯಲ್ಲಿ ಆಯಿತು. ಅವರ ದೇಹ ತೀರ ದುರ್ಬಲವಾಗಿದ್ದ ಕಾರಣ ಮಗುವನ್ನು ಪಡೆದ ಒಂಬತ್ತು ದಿನಗಳಲ್ಲಿ ಅಂದರೆ ಜುಲೈ ೨೯ ೧೯೬೩ರಂದು ಎಲ್ಲವನ್ನು ಬಿಟ್ಟು ಇಹಲೋಕ ತ್ಯಜಿಸಿದರು.

ಆಧುನಿಕ ಕನ್ನಡ ಸಾಹಿತ್ಯ ಪ್ರಕಾರಗಳಲ್ಲಿ ಕಾದಂಬರಿ ಸಾಹಿತ್ಯವೂ ಒಂದು. ಇದು ೨೦ನೇ ಶತಮಾನದ ಸುಮಾರು ಐವತ್ತರ ದಶಕದಲ್ಲಿ ಇತರ ಎಲ್ಲಾ ಸಾಹಿತ್ಯ ಪ್ರಭೇದಗಳಿಗಿಂತ ಹೆಚ್ಚು ಜನಪ್ರಿಯವಾಗಿದ್ದ ಸಂದರ್ಭದಲ್ಲಿ ತ್ರಿವೇಣಿಯವರು ಸಾಹಿತ್ಯ ಕ್ಷೇತ್ರಕ್ಕೆ ಕಾಲಿಟ್ಟರು. ಈ ಕಾಲಕ್ಕಾಗಲೆ ಶಿವರಾಮಕಾರಂತ, ಅನಕೃ, ತರಾಸು, ನಿರಂಜನ ಮುಂತಾದವರು ಕಾದಂಬರಿ ಕ್ಷೇತ್ರದಲ್ಲಿ ಹೆಸರಾಗಿದ್ದರು. ಅನಕೃ, ತರಾಸು ಅವರ ಪ್ರಗತಿಶೀಲಧೋರಣೆಯ ಕಾದಂಬರಿಗಳು ಮಧ್ಯಮ ವರ್ಗದ ಜನರ ಬದುಕಿನ ಸಮಸ್ಯೆ – ಸಂದಿಗ್ಧಗಳನ್ನು ಬಿಂಬಿಸಿದವು. ಹೀಗಾಗಿ ಕಾದಂಬರಿ ಪ್ರಭೇದ ಪ್ರಬುದ್ಧವಾಗಿ ಬೆಳೆಯುತ್ತಿದ್ದ ಸಮಯದಲ್ಲಿಯೇ ತ್ರಿವೇಣಿಯವರ ಪ್ರವೇಶವಾಯಿತು. ಇವರು ಮೊದಲು ಸಣ್ಣ ಕಥೆಗಳ ಮೂಲಕ ಸಾಹಿತ್ಯ ಕ್ಷೇತ್ರವನ್ನು ಪ್ರವೇಶಿಸಿದರೂ ಅವರ ಜಾಯಮಾನಕ್ಕೆ ಹೆಚ್ಚಾಗಿ ಒಗ್ಗಿಕೊಂಡದ್ದು ಕಾದಂಬರಿ ಸಾಹಿತ್ಯ.

ತ್ರಿವೇಣಿಯವರಿಗೂ ಮೊದಲು ಕೆಲವು ಹಿರಿಯ ಲೇಖಕಿಯರು ಕಾದಂಬರಿ ರಚಿಸಿದ್ದರೂ ಕೂಡ ಅವರಲ್ಲಿ ಸ್ತ್ರೀಪರವಾದ ನಿಲುವುಗಳು ತ್ರಿವೇಣಿಯವರ ಕಾದಂಬರಿಗಳಲ್ಲಿರುವಂತೆ ದಟ್ಟವಾಗಿ ಕಂಡುಬರುವುದಿಲ್ಲ. ಅವರೆಲ್ಲ ಹೆಣ್ಣನ್ನು ಕೇಂದ್ರವಾಗಿಸಿ ಕೃತಿ ರಚಿಸಿದರೂ ಕೂಡ ಸಂಪ್ರದಾಯಬದ್ಧ ಮೌಲ್ಯಗಳ ಮಿತಿಗಳ ಒಳಗೇ ಉಳಿಯಲು ಪ್ರಯತ್ನಿಸಿದರು. ಆದರೆ ತ್ರಿವೇಣಿಯವರು ಸಂಪೂರ್ಣವಾಗಿ ಸ್ತ್ರೀಕೇಂದ್ರಿತ ದೃಷ್ಟಿಕೋನದ ಕಾದಂಬರಿಗಳನ್ನು ರಚಿಸಿ ಸಾಮಾಜಿಕ ವ್ಯವಸ್ಥೆಯಲ್ಲಿ ಹೆಣ್ಣಿನ ಸಮಸ್ಯೆಯ ವಿವಿಧ

ಮಜಲುಗಳನ್ನು ಗುರುತಿಸಿ ಸಮಸ್ಯೆಯ ಮೂಲವನ್ನು ಹುಡುಕುವ ಪ್ರಯತ್ನ ಮಾಡಿದ್ದಾರೆ. ಜೊತೆಗೆ ಸಮಸ್ಯೆಯ ಪರಿಹಾರ ಮಾರ್ಗವನ್ನು ಕಾದಂಬರಿ ಒಳಗೆ ಸೂಚಿಸಿರುವುದು ಇವರ ಕಾದಂಬರಿಗಳ ವಿಶೇಷವಾಗಿದೆ.

ಮನೋವಿಜ್ಞಾನವನ್ನು ಐಚ್ಛಿಕ ವಿಷಯವಾಗಿ ಅಭ್ಯಸಿಸಿ ಪದವಿಯನ್ನು ಪಡೆದಿದ್ದ ತ್ರಿವೇಣಿ ಹಿಂದೂ ಸಾಮಾಜಿಕ ವ್ಯವಸ್ಥೆಯಲ್ಲಿರುವ ಹೆಣ್ಣಿನ ಬದುಕಿನ ಎಲ್ಲ ಅಂಶಗಳನ್ನು ಗ್ರಹಿಸಿದರು. "ಹೆಣ್ಣು ಏನು ತಾನೆ ಬರೆದಾಳು ಅವಳು ನಾಲ್ಕು ಗೋಡೆಗಳ ಮಧ್ಯೆ ಇರುತ್ತಾಳೆ. ಅದೇ ಅವಳ ಅನುಭವ ಪ್ರಪಂಚ" ಇಂಥ ಕುಹಕ ಮಾತುಗಳಿಗೆ ಪಕ್ಷಪಾತೀ ಧೋರಣೆಗೆ ಸವಾಲಾಡುವಂತೆ ತ್ರಿವೇಣಿ ಬರೆದರು. ಇವರ ಕಾದಂಬರಿಗಳಲ್ಲಿ ಸ್ತ್ರೀಲೋಕದ ವಾಸ್ತವ ವಸ್ತುನಿಷ್ಠ ಚಿತ್ರಣ ನೀಡಿದರು. ತ್ರಿವೇಣಿ ಹೆಣ್ಣಿನ ಸೀಮಿತ ಲೋಕದ ಭ್ರಮೆ, ಕನಸ್ಸು, ಕಲ್ಪನೆಗಳಿಗೆ ಮತ್ತು ಮೀಸಲಾಗದ ಅದರಿಂದಾಚೆಗಿನ ಸಮಾಜದ ಜನರ ಬದುಕಿನಲ್ಲಿ ಅಡಗಿರುವ ನೈಜಸತ್ಯಗಳನ್ನು ಸೂಕ್ಷ್ಮವಾಗಿ ಅಭ್ಯಾಸಿಸಿದರು. ಈ ಒಂದು ಅವಲೋಕನಾಶಕ್ತಿ, ಸಂವೇದನಾಶೀಲತೆ, ಸ್ಪಂಧನಾಮನೋಭಾವಗಳನ್ನು ಅವರ ಕಾದಂಬರಿಗಳಿಗೆ ಜೀವಂತಿಕೆ ತಂದುಕೊಟ್ಟಿವೆ. ಜೊತೆಗೆ ಪುಸ್ತಕ ಪ್ರೀತಿಯಿಂದ ಸತತ ಓದುವ ಅಭ್ಯಾಸ ಹಾಗೂ ವಿಷಯವನ್ನು ಸಂಗ್ರಹಿಸುವ ಅಭ್ಯಾಸ ತ್ರಿವೇಣಿಯವರಿಗೆ ಇದ್ದದು ಅವರ ಬರವಣಿಗೆಗೆ ಹೊಸ ಆಯಾಮವನ್ನು ನೀಡಿತು. ಕೃತಿರಚನೆಗೆ ಮುನ್ನ ಸ್ನೇಹಿತರೊಂದಿಗೆ ಪತಿಯೊಂದಿಗೆ ವಿಷಯವನ್ನು ಚರ್ಚಿಸುತ್ತಿದ್ದರಿಂದಲೋ ಏನೋ ಇವರ ಬರವಣಿಗೆಯಲ್ಲಿ ಒಂದು ರೀತಿಯ ಶಿಸ್ತು ಪ್ರಬುದ್ಧತೆ ಹಾಗೂ ಗಟ್ಟಿತನ ಕಾಣುತ್ತದೆ.

ತ್ರಿವೇಣಿಯವರು ತಾವು ಕಂಡು, ಕೇಳಿದ, ಅನುಭವಿಸಿದ ವಿಚಾರಗಳನ್ನು ಸಹಜ ಭಾಷೆಯಲ್ಲಿ ಕಾದಂಬರಿಗಳ ರೂಪದಲ್ಲಿ ಹಿಡಿದಿಟ್ಟಿದ್ದಾರೆ. ಇವರೆ ಕಾದಂಬರಿ ಪ್ರಪಂಚ ಗಂಡ-ಹೆಂಡತಿಯರ ಚಿಕ್ಕ ಸಂಸಾರದಿಂದ ಹಿಡಿದು ಸಾಮಾಜಿಕ ಸಮಸ್ಯೆಗಳ ಇತಿಮಿತಿಗಳವರೆಗೂ ಇದೆ. ಕಾದಂಬರಿ ವಸ್ತುಪ್ರಪಂಚ ಸಾಮಾನ್ಯವಾದುದರೂ ನಿರ್ವಹಣಾ ಸಾಮರ್ಥ್ಯದಲ್ಲಿ ವಿಶಿಷ್ಟತೆ ಸಾಧಿಸಿದ್ದಾರೆ. ಹೆಣ್ಣಿನ ಬದುಕಿನ ಸಮಸ್ಯೆಗಳನ್ನು ಮಾತ್ರ ಬಿಚ್ಚಿಡದೆ ಆ ಸಮಸ್ಯೆಯ ಪರಿಹಾರ ಸಾಧ್ಯತೆಗಳನ್ನು ಹೊಸ ಚಿಂತನಾಕ್ರಮದಲ್ಲಿ ಅನಾವರಣಗೊಳಿಸುತ್ತಾರೆ. ಸಾಮಾಜಿಕ ಸಮಸ್ಯೆಗಳ ಜೊತೆ ಮನುಷ್ಯನ ಆಂತರಿಕ ಹೋರಾಟವನ್ನು ಮನೋವೈಜ್ಞಾನಿಕ ನೆಲೆಯಲ್ಲಿ ಗುರುತಿಸಿರುವುದು ಇವರ ಕಾದಂಬರಿ ವಸ್ತು ವೈಶಿಷ್ಟ್ಯವಾಗಿದೆ. ಕೌಟುಂಬಿಕ, ಸಾಮಾಜಿಕ ಸಮಸ್ಯೆಗಳು ಹಾಗೂ ಮನೋವೈಜ್ಞಾನಿಕ ಸಮಸ್ಯೆಗಳನ್ನು ಒಂದರೊಳಗೊಂದು ಬೆಸೆಯುವ ತಂತ್ರ ಇವರಲ್ಲಲ್ಲದೆ ಮತ್ತೆ ಯಾರಲ್ಲೂ ಕಂಡುಬರುವುದಿಲ್ಲ.

ತ್ರಿವೇಣಿಯವರ ಒಟ್ಟು ೨೧ ಕಾದಂಬರಿಗಳಲ್ಲಿ ನಾಲ್ಕು ಮನೋವೈಜ್ಞಾನಿಕ ಕಾದಂಬರಿಗಳು ಉಳಿದವು. ಕೌಟುಂಬಿಕ ಹಾಗೂ ಸಾಮಾಜಿಕ ಸಮಸ್ಯೆಗಳನ್ನು ಒಳಗೊಂಡ ಕಾದಂಬರಿಗಳು ನಿತ್ಯಜೀವನದಲ್ಲಿ ನಡೆಯುವ ಘಟನೆಗಳನ್ನು ಪಾತ್ರ ಮತ್ತು ಸಹಜ ವಸ್ತುವಿನೊಂದಿಗೆ ಜೋಡಿಸಿ ಸುಂದರವಾಗಿ, ರಂಜನೀಯವಾಗಿ ಕತೆಯನ್ನು ಹೆಣೆಯುವುದು ತ್ರಿವೇಣಿಯವರ ಮೂಲ ಉದ್ದೇಶ. ಹೆಣ್ಣಿನ ವಿವಾಹ, ವರದಕ್ಷಿಣೆ, ಲೈಂಗಿಕ ದಬ್ಬಾಳಿಕೆ, ಮಾನಸಿಕ ಹೋರಾಟ, ವೇಶ್ಯಾ ಸಮಸ್ಯೆ, ವಿಧವಾ ಸಮಸ್ಯೆ, ವಿವಾಹೇತರಪ್ರೇಮ, ವಿಷಮ ದಾಂಪತ್ಯ, ಆಯ್ಕೆಯ ; ಸ್ವಾತಂತ್ರ್ಯ, ಶಿಕ್ಷಣ ಇವುಗಳು ಒಂದೊಂದು ಕಾದಂಬರಿಯಲ್ಲಿಯೂ ಪ್ರಧಾನ ಕಾಳಜಿಯಾಗಿ ಚಿತ್ರಿತವಾಗಿದೆ. ಮೊದಲು ಸಾಮಾಜಿಕ ಕಾದಂಬರಿನ್ನು ಈ ಮುಂದೆ ಚರ್ಚಿಸಲಾಗಿದೆ.

ತ್ರಿವೇಣಿಯವರ ಮೊಟ್ಟ ಮೊದಲ ಕಾದಂಬರಿ 'ಅಪಸ್ವರ'. ಆದರೆ ಕಾರಣಾಂತರಗಳಿಂದ 'ಹೂವು ಹಣ್ಣು' ಮೊದಲ ಕಾದಂಬರಿಯಾಗಿ ೧೯೫೦ರಲ್ಲಿ ಪ್ರಕಟವಾಯಿತು. ಈ ಕಾದಂಬರಿಯ ವಸ್ತು ಆ ಕಾಲದಲ್ಲಿ ಜನಪ್ರಿಯವಾಗಿದ್ದ ವೇಶ್ಯಾಸಮಸ್ಯೆ ಐವತ್ತರ ದಶಕದ ಆದಿಭಾಗದಲ್ಲಿ ಅತ್ಯಂತ ಜನಪ್ರಿಯ ಕಾದಂಬರಿಕಾರರೆಂದು ಹೆಸರಾಗಿದ್ದ ಅನಕೃರವರು ವೇಶ್ಯಾಸಮಸ್ಯೆಯನ್ನಾಧರಿಸಿ ಮೂರು ಕಾದಂಬರಿಗಳನ್ನು ಬರೆದರು. ಆದರೆ, ಅವು ಅಶ್ಲೀಲವೆಂದು ಹಾಗೂ ವೇಶ್ಯೆಯ ಜೀವನವನ್ನು ವೈಭವೀಕರಿಸುತ್ತವೆಂದು ಕಟು ವಿಮರ್ಶೆಗೆ ಒಳಗಾಗಿ ಒಂದು ದೊಡ್ಡ ವಿವಾದವನ್ನೇ ಎಬ್ಬಿಸಿದ್ದವು. ಇದೇ ಕಾಲದಲ್ಲಿ ತರಾಸು ಅವರ 'ಮಸಣದ ಹೂವು' ಕಾದಂಬರಿ ಹೊರಬಂದಿತ್ತು. ಅದರಲ್ಲಿನ ವೇಶ್ಯಾಗೃಹಗಳ ಸ್ಪಷ್ಟ ಚಿತ್ರಣದಿಂದಾಗಿ ಅಂದಿನ ಶೀಲಾಶ್ಲೀಲ ವಿವಾದ ಮತ್ತಷ್ಟು ತೀವ್ರವಾಗಿತ್ತು. ಇಂತಹ ಸಾಹಿತ್ಯಕ ವಾತಾವರಣದಲ್ಲಿ ತ್ರಿವೇಣಿಯವರ 'ಹೂವು ಹಣ್ಣು' ಹೊರಬಂತು.

ಚಿಕ್ಕಂದಿನಲ್ಲಿಯೇ ವಿಧವೆಯಾಗಿ ಬಡತನಕ್ಕೆ ಸಿಕ್ಕಿದ ಅನಾಥೆಯೊಬ್ಬಳು ತನ್ನ ಒಬ್ಬಳೆ ಮಗಳನ್ನು ಸಾಕಲು ನಡೆಸುವ ಹೋರಾಟದಲ್ಲಿ ಕಾಮುಕರ ಕಣ್ಣಿನಿಂದ ಪಾರಾಗಲಾರದೆ ವೇಶ್ಯಾಜೀವನವನ್ನು ಅನಿವಾರ್ಯವಾಗಿ ನಡೆಸಬೇಕಾದ ದುರ್ದೈವಿ ಹೆಣ್ಣಿನ ಬಾಳನ್ನು ಚಿತ್ರಿಸುವ ಕಾದಂಬರಿ 'ಹೂವು ಹಣ್ಣು'.

ಈ ಕಾದಂಬರಿಯಲ್ಲಿ ವೇಶ್ಯಾಸಮಸ್ಯೆಯನ್ನು ರಂಜನೀಯ ವಸ್ತುವಾಗಿ ಚಿತ್ರಿಸಿದೆ. ಆದರೆ ತಾಯಿಯ ದೃಷ್ಟಿಕೋನದ ಮೂಲಕ ಚಿತ್ರಿತವಾಗಿರುವುದು ಇಲ್ಲಿನ ವಿಶೇಷ. "ವೇಶ್ಯೆಯಾದರೂ ತಾಯಿ ತಾಯಿಯೇ" ಎಂಬ ಪೂರ್ವನಿಶ್ಚಿತ ಸಿದ್ಧಾಂತವನ್ನು ಪ್ರತಿಪಾದಿಸಲು ಬರೆದಿರುವ ಕಾದಂಬರಿ. ಆದ್ದರಿಂದ ಕಾದಂಬರಿಯಲ್ಲಿ

ಅನೇಕ ಘಟನೆಗಳು ಅಸಹಜವೆನಿಸುತ್ತವೆ. ಕಾದಂಬರಿಯ ವಸ್ತು ವೇಶ್ಯಾವೃತ್ತಿ ಹಾಗೂ ಅವರ ಮಾನಸಿಕ ಪ್ರವೃತ್ತಿಯ ಬಗೆಗೆ ತ್ರಿವೇಣಿಯವರಿಗೆ ಸಾಕಷ್ಟು ಪರಿಚಯವಿಲ್ಲದಿರುವುದು ಇಲ್ಲಿನ ಕೃತಕತೆಗೆ ಮತ್ತೊಂದು ಕಾರಣವಿರಬಹುದು. ಸಾಮಾನ್ಯವಾದ ಅನುಭವವೊಂದನ್ನು ಬಹಳ ಸರಳ ರೀತಿಯಲ್ಲಿ ಚಿತ್ರಿಸಿದ್ದಾರೆ.

ಅವರ ಮುಂದಿನ ಕಾದಂಬರಿ ೧೯೫೬ರಲ್ಲಿ ಪ್ರಕಟಗೊಂಡ 'ಅಪಸ್ವರ'ದ ಕಥಾವಸ್ತು ಹೀಗಿದೆ. ಬಾಲ್ಯದಲ್ಲಿಯೇ ತಬ್ಬಲಿಯಾಗಿ ದೊಡ್ಡಪ್ಪನ ಮನೆ ಸೇರುವ ಹೆಣ್ಣು ಮನಸ್ಸಿನಲ್ಲಿ ಬೀಜ ಬಿತ್ತಿದ್ದ ತನ್ನ ಹಿರಿಯಾಸೆಯೊಂದು ಕೊನರೊಡೆಯುವ ಮುನ್ನವೆ ಹಿರಿಯರ ಬಲವಂತದಿಂದ ತಾನು ಬಯಸದ ವಿವಾಹ ಜೀವನಕ್ಕೆ ಕಾಲಿಡುತ್ತಾಳೆ. ನಂತರ ವಿಧಿಯ ಕೈವಾಡಕ್ಕೆ ಸಿಕ್ಕಿ, ಜೀವನದಲ್ಲಿ ನೊಂದು ಕಡೆಗೆ ತಾನು ಬಾಲ್ಯದಲ್ಲಿ ಬಯಸಿದ ಆಸೆಯನ್ನು ಈಡೇರಿಸಿಕೊಳ್ಳಲು ಹೊರಡುತ್ತಾಳೆ.

ಈ ಕಾದಂಬರಿ ತ್ರಿವೇಣಿಯವರ ಕೃತಿಗಳ ಸಾಲಿನಲ್ಲಿ ಮಹತ್ವದ ಸ್ಥಾನವನ್ನು ಪಡೆಯುತ್ತದೆ. ಎರಡು ಭಿನ್ನ ಜೀವನಕ್ರಮಗಳನ್ನು ಪ್ರಬಲ ವ್ಯಕ್ತಿತ್ವದಿಂದ ಕೂಡಿದ ಎರಡು ಪಾತ್ರಗಳನ್ನು ಅಂದರೆ ಅಲ್ಪತೃಪ್ತ ಪತಿ, ಮಹತ್ವಾಕಾಂಕ್ಷೆಯ ಪತ್ನಿ ಹಾಗೂ ಎರಡು ಮೌಲ್ಯ ವ್ಯವಸ್ಥೆಗಳನ್ನು ತುಲನಾತ್ಮಕವಾಗಿ ಪರೀಕ್ಷಿಸಿರುವ ಈ ಕಾದಂಬರಿ ತ್ರಿವೇಣಿಯವರ ಕಾದಂಬರಿ ಸಾಹಿತ್ಯದಲ್ಲೇ ವಿಶಿಷ್ಟವಾಗಿದೆ. ಇಲ್ಲಿ ಒಂದು ವಿಷಮ ದಾಂಪತ್ಯವು ಹೇಗೆ ಗಂಡ ಮತ್ತು ಹೆಂಡತಿ ಇಬ್ಬರನ್ನೂ ಸಮನಾಗಿ ದುಃಖಕ್ಕೀಡು ಮಾಡುತ್ತದೆಂಬುದನ್ನು ಅತ್ಯಂತ ವಸ್ತುನಿಷ್ಠವಾಗಿ ಎಂದರೆ ಸತಿಪತಿಯರಿಬ್ಬರಿಗೂ ಸಮಾನ ನ್ಯಾಯವನ್ನು ದೊರಕಿಸಿಕೊಟ್ಟಿರುವ ಒಂದು ವಿಶೇಷ ಕಾದಂಬರಿ. ಅಲ್ಲದೆ ಕಾದಂಬರಿಯಲ್ಲಿ ಗ್ರಾಮೀಣ ಹಾಗೂ ನಗರ ಜೀವನ ಶೈಲಿಗಳ ವೈದೃಶ್ಯವನ್ನು ಕಾಣಬಹುದು. ಈ ವೈದೃಶ್ಯದ ಪರಿಣಾಮವಾಗಿ ಮೀರಾ ಅನುಭವಿಸುವ ಪರಕೀಯ ಸ್ಥಿತಿಯನ್ನು ಪರಿಣಾಮಕಾರಿಯಾಗಿ ದಾಖಲಿಸುತ್ತದೆ.

'ಅಪಸ್ವರ' ಕಾದಂಬರಿಯಲ್ಲಿ ಅಪೂರ್ಣವಾಗಿ ನಿಲ್ಲಿಸಿದ್ದ ನಾಯಕಿಯ ಜೀವನದ ಮುಂದಿನ ಚಿತ್ರಣವನ್ನು ತ್ರಿವೇಣಿಯವರು ನಾಲ್ಕು ವರ್ಷಗಳ ತರುವಾಯ ೧೯೬೦ರಲ್ಲಿ ಪ್ರಕಟಗೊಂಡ 'ಅಪಜಯ' ಕಾದಂಬರಿಯಲ್ಲಿ ಮುಂದುವರೆಯುತ್ತದೆ. ಆದ್ದರಿಂದ ಇದನ್ನು 'ಅಪಸ್ವರ'ದ ಎರಡನೆಯ ಭಾಗವೆನ್ನಬಹುದು. ಇದು ಯಾಂತ್ರಿಕವಾಗಿ ಮೂಡಿಬಂದಿದೆ. ಈ ಕಾದಂಬರಿಯಲ್ಲಿ ಮೆಡಿಕಲ್ ಕಾಲೇಜಿನ ಚಿತ್ರಣ ಸಹಜ-ಸುಂದರವಾಗಿ ಮೂಡಿಬಂದಿದೆ. ಮೀರಾಳ ಸ್ನೇಹಿತರಾದ ಇಬ್ಬರು ತರುಣ ಪ್ರೇಮಿಗಳ ಸುತ್ತ ನಡೆಯುವ ಉಪಕಥೆಯಲ್ಲಿ ಎರಡು ಹೃದಯಗಳ ಮಿಲನವೇ ನಿಜವಾದ ಅರ್ಥದಲ್ಲಿ ಮದುವೆ ಎಂಬುವನ್ನು ಇಲ್ಲಿ

ಪ್ರತಿಪಾದಿಸಿದ್ದಾರೆ. ಈ ಕಥೆ ವಿಷಮದಾಂಪತ್ಯದ ಹಾಗೂ ದುಃಖಾಂತವಾದ ಮುಖ್ಯ ಕಥೆಗೆ ಒಂದು ಸಫಲ ಹಿನ್ನೆಲೆಯನ್ನು ಕೊಡುತ್ತದೆ.

ಈ ಎರಡು ಕಾದಂಬರಿಗಳಲ್ಲಿ ತ್ರಿವೇಣಿಯವರು ವಿರುದ್ಧ ದಿಕ್ಕಿನಲ್ಲಿ ಯೋಚಿಸುವ, ಚಿಂತಿಸುವ, ಭಾವಿಸುವ, ಪರಸ್ಪರ ಹೊಂದಾಣಿಕೆಯಿಲ್ಲದ ವಿದ್ಯಾವಂತಳಾದ ಪಟ್ಟಣದ ಹೆಣ್ಣಿನ ಮತ್ತು ಸುಸಂಸ್ಕೃತ ಹಾಗೂ ಹೃದಯ ಶ್ರೀಮಂತಿಕೆ ಇರುವ ಹಳ್ಳಿಯ ಗಂಡಿನ ನಡುವಿನ ದಾಂಪತ್ಯಜೀವನದ ಸಮಸ್ಯೆಗಳನ್ನು ಬಿಡಿಸಲು ಯತ್ನಿಸಿದ್ದಾರೆ.

'ಸೋತು ಗೆದ್ದವಳು' ೧೯೫೪ರಲ್ಲಿ ಪ್ರಕಟಗೊಂಡ ತ್ರಿವೇಣಿಯವರ ಮೂರನೆ ಕಾದಂಬರಿ. ಯಾವುದೋ ದುರ್ಬಲ ಘಳಿಗೆಯಲ್ಲಿ ದೇಹದ ಬಯಕೆಗೆ ಬಲಿಬಿದ್ದ ವಿವಾಹಿತ ಸ್ತ್ರೀಯೊಬ್ಬಳ ಕಥೆಯನ್ನು ನಿರೂಪಿಸುತ್ತದೆ. ದೌರ್ಬಲ್ಯಕ್ಕೆ ಸೋತ ಮಾನವಪ್ರಕೃತಿಯನ್ನು ಕಾದಂಬರಿ ಪ್ರತಿಪಾದಿಸುತ್ತದೆ.

ಲೈಂಗಿಕ ವಿಚಾರಗಳಲ್ಲಿ ಹೆಣ್ಣಾಗಲಿ, ಗಂಡಾಗಲಿ ಮಾಡುವ ತಪ್ಪನ್ನು ಮನ್ನಿಸಿ ಮರೆತುಬಿಡುವುದು ಲೇಸು ಎಂಬ ತತ್ತ್ವದ ಪ್ರತಿಪಾದನೆ ಕಾದಂಬರಿಯಲ್ಲಿದೆ. ಆತ್ಮಸಂಯಮವಿಲ್ಲದೆ ಜಾರಿದ ಹೆಣ್ಣಿನ ಪರವಾಗಿ ಸಮಾಜದ ರೀತಿ ನೀತಿಗಳನ್ನು ಕಂಡ ಲೇಖಕಿ ಹೆಣ್ಣು ಗಂಡಿನಂತೆ ದೈಹಿಕ ಸುಖಕ್ಕಾಗಿ ಸೋಲುವ ಘಳಿಗೆಯೂ ಇದೆ. ಅದನ್ನು ಅಪರಾಧವಾಗಿ ಭಾವಿಸಬಾರದೆಂದು ಈ ಕಾದಂಬರಿಯಲ್ಲಿ ಸಮರ್ಥಿಸಿಕೊಂಡಿದ್ದಾರೆ.

೧೯೫೫ರಲ್ಲಿ ಪ್ರಕಟವಾದ 'ಕೀಲುಗೊಂಬೆ' ಕಾದಂಬರಿ ಸಂಪೂರ್ಣ ಸ್ತ್ರೀಪರ ಚಿಂತನೆಯಿಂದ ಕೂಡಿದೆ. ಈ ಕಾದಂಬರಿಯಲ್ಲಿ ಲೇಖಕಿ ಸ್ತ್ರೀಯ ಅನೇಕ ಬಗೆಯ ಶೋಷಣೆಗೆ ಕಾರಣವಾದ ಪುರುಷಪ್ರಧಾನ ಸಮಾಜವನ್ನು ಕಟುವಾಗಿ ಟೀಕಿಸಿದ್ದಾರೆ. ಆದ್ದರಿಂದಲೇ ಪ್ರಕಟವಾದ ಕೂಡಲೇ ಈ ಕಾದಂಬರಿ ಪುರುಷದ್ವೇಷದಿಂದ ಕೂಡಿದೆಯೆಂದು ಕೆಲವರ ಟೀಕೆಗೆ ಕಾರಣವಾದ ಈ ಕಾದಂಬರಿಯೂ ವಿಷಮ ದಾಂಪತ್ಯದ ಚಿತ್ರಣವನ್ನು ಕೊಡುತ್ತದೆ. ಪಾರಂಪರಿಕ ವಿವಾಹದ ಚೌಕಟ್ಟಿನಲ್ಲಿ ಅಡಗಿರುವ ಅಸೀಮ ಕ್ರೌರ್ಯವನ್ನು ಈ ಕೃತಿ ಪ್ರಬಲವಾಗಿ ದಾಖಲಿಸುತ್ತದೆ.

ಮೃದು ಹೃದಯದ ಪತಿವ್ರತೆಯೊಬ್ಬಳು ಬಾಳಿನುದ್ದಕ್ಕೂ ಅತಿಕಾಮಿಯಾದ ಗಂಡನ ಕೀಲುಗೊಂಬೆಯಾಗಿ ಬಾಳಬೇಕಾಗಿ ಬಂದ ದುರಂತ ಕಥೆಯನ್ನು 'ಕೀಲುಗೊಂಬೆ' ಕಾದಂಬರಿಯಲ್ಲಿ ಚಿತ್ರಿತವಾಗಿದೆ. ಈ ಕಾದಂಬರಿಯಲ್ಲಿ ಮನಸೆಳೆಯುವ ಸನ್ನಿವೇಶವೆಂದರೆ ಮಧು–ರೋಹಿಣಿಯವರ

ಪ್ರೇಮಾಂಕುರದ ಭಾಗ. ಆದರೆ ಆ ಪ್ರೇಮ ಪ್ರಕರಣವನ್ನು ಸಂಪೂರ್ಣವಾಗಿ ಬೆಳಸದೆ, ಅದನ್ನು ಕಥೆಗೆ ಹೊಂದಿಸಿಕೊಳ್ಳದೆ ಹೋಗಿರುವುದರಿಂದ ಓದುಗರಿಗೆ ನಿರಾಶೆಯುಂಟಾಗುತ್ತದೆ. ಕಾದಂಬರಿಯ ಸರಳ ಭಾಷೆ, ಕೆಲವು ಮೃದು ಭಾವನೆಗಳು ಹಾಗೂ ಹೋಲಿಕೆಗಳು ರಂಜನೀಯವಾಗಿದ್ದು ಮನಮುಟ್ಟುತ್ತವೆ. ಕಥೆಯು ಮೊದಮೊದಲು ಸಾವಧಾನವಾಗಿ ಸಾಗಿ, ಮಧುಸೂಧನನ ಜನನದ ನಂತರ ನಾಗಾಲೋಟದಲ್ಲಿ ಸಾಗುತ್ತದೆ. ಅನೇಕ ಮಿತಿಗಳಿದ್ದರೂ 'ಕೀಲುಗೊಂಬೆ' ಹಿಂದೂ ಸಮಾಜದಲ್ಲಿ ಸ್ತ್ರೀಗಿರುವ, ಇಲ್ಲದಿರುವ ಸ್ಥಾನಮಾನಗಳ ಬಗ್ಗೆ ಸ್ತ್ರೀಯೊಬ್ಬಳು ಬರೆದಿರುವ ಪ್ರಥಮ ಪ್ರಮುಖ ಕಾದಂಬರಿಯಾಗಿದೆ.

'ಮೊದಲ ಹೆಜ್ಜೆ' ತ್ರಿವೇಣಿಯವರ ಕಾದಂಬರಿ ಕ್ಷೇತ್ರದಲ್ಲಿ ಎಳನೆಯ ಹೆಜ್ಜೆ ೧೯೫೭ರಲ್ಲಿ ಪ್ರಕಟವಾದ ಈ ಕಾದಂಬರಿ ಕುರೂಪಿಯಲ್ಲದಿದ್ದರೂ ಸುಂದರಿಯಲ್ಲದ ಕಪ್ಪು ಬಣ್ಣದ ಬಡವಳಾದ ಅವಿವಾಹಿತ ಯುವತಿಯೊಬ್ಬಳು ಗಂಡಿನ ಕಾಮತೃಷೆಗೆ ಬಲಿಯಾಗಿ, ಬೇಡದ ಮಗುವಿನ ತಾಯಿಯಾಗಿ, ಆ ಮಗುವನ್ನು ಸಾಕಲು ಶಕ್ತಿಯಿಲ್ಲದೆ ಹಾಗೂ ಅದರ ಭವಿಷ್ಯಕ್ಕೆ ಹೆದರಿ ಅದನ್ನು ಕೊಲೆ ಮಾಡಿದ ಅಪರಾಧಕ್ಕೆ ಜೈಲು ಸೇರುವ ದುರಂತ ಹೆಣ್ಣಿನಕಥೆ ಈ ಕಾದಂಬರಿಯ ಕಥಾವಸ್ತು.

'ಕೀಲುಗೊಂಬೆ'ಯಂತೆಯೇ ಈ ಕಾದಂಬರಿಯಲ್ಲಿಯೂ ಹೆಣ್ಣಿಗೊಂದು ಗಂಡಿಗೊಂದು ಸಾಮಾಜಿಕ ವರ್ತನೆ ಹಾಗೂ ನೈತಿಕ ಮಾನದಂಡಗಳನ್ನು ರೂಪಿಸುವ ಪುರುಷ ಕೇಂದ್ರಿತ ಸಮಾಜವನ್ನು ಉಗ್ರವಾಗಿ ಖಂಡಿಸುತ್ತದೆ. ನಿರೂಪಣಾ ನೆಲೆಯಲ್ಲಿಯೂ ಈ ಕಾದಂಬರಿ ಗಮನಾರ್ಹವಾಗಿದೆ. ಕಾದಂಬರಿಯ ಮೊದಲನೆಯ ಮತ್ತು ಕೊನೆಯ ಭಾಗಗಳು ಕೇಂದ್ರಪಾತ್ರದ ಮೂಲಕ ಸ್ವಗತರೂಪದಲ್ಲಿ ನಿರೂಪಿಸಲ್ಪಟ್ಟಿವೆ. ಈ ನಿರೂಪಕಿಯ ಹೆಸರು ಕಾದಂಬರಿಯಲ್ಲೆಲ್ಲೂ ನಮಗೆ ಗೊತ್ತಾಗುವುದಿಲ್ಲ. ಕಾದಂಬರಿಯ ಎರಡನೆಯ ಭಾಗವನ್ನು ಶಿವಸ್ವಾಮಿ ಹಾಗೂ ಮೂರನೆಯ ಭಾಗವನ್ನು ಆಸ್ಪತ್ರೆಯ ದಾದಿಯೊಬ್ಬಳು ಘಟನೆಗಳು ನಿರೂಪಿಸುವ ಧಾಟಿಯಲ್ಲಿ ಕಥೆ ಸಾಗುತ್ತದೆ. ಈ ಕಾದಂಬರಿಯಲ್ಲಿ ಆಸ್ಪತ್ರೆ ಹಾಗೂ ಜೈಲಿನ ಜೀವನದ ಬಗ್ಗೆ ನೈಜ ಚಿತ್ರಣವಿದೆ.

'ಕಂಕಣ' ಅದರ ಮುಂದುವವರೆದ ಭಾಗ 'ಮುಕ್ತಿ' ತ್ರಿವೇಣಿಯವರ ಮಹತ್ವಾಕಾಂಕ್ಷೆಯ ಕೃತಿಗಳು. ಆರು ಜನ ಅವಿವಾಹಿತೆ ತರುಣಿಯರು ತಮ್ಮ ತಮ್ಮ ಪರಿಸರಕ್ಕೆ ತಕ್ಕಂತೆ ಯಾವ ರೀತಿ ಹೊಂದುಕೊಳ್ಳುತ್ತಾರೆಂಬುದನ್ನು 'ಕಂಕಣ' ಕಾದಂಬರಿಯಲ್ಲಿ ಚಿತ್ರಿತವಾಗಿದೆ. ಬೇರೆ ಬೇರೆ ಕುಟುಂಬಗಳಿಂದ ಬಂದ ಆರು ಜನ ಸ್ನೇಹಿತೆಯರು ಜೀವನದ ಸಮಸ್ಯೆಗಳನ್ನು ಎದುರಿಸುವ ಬಗ್ಗೆ ತಾಳುವ ನಿಲುವು, ಅವರ

ದೃಷ್ಟಿಕೋನಗಳನ್ನು ಹಾಗೂ ಪರಿಸ್ಥಿತಿಗನುಗುಣವಾಗಿ ಅವರು ಹೊಂದಿಕೊಳ್ಳುವ ಬಗ್ಗೆ ಇವುಗಳನ್ನು ಅತ್ಯಂತ ಸ್ವಾಭಾವಿಕವಾಗಿ, ವಾಸ್ತವಿಕ ನೆಲೆಯಲ್ಲಿ ಚಿತ್ರಿತವಾಗಿದೆ. ಕಂಕಣದಲ್ಲಿ ಭಿನ್ನ ಮನೋಭಾವದ ಹುಡುಗಿಯರು ಕರ್ತವ್ಯದ ಕಂಕಣ ತೊಟ್ಟು ಅಷ್ಟಕ್ಕೇ ಸುಮ್ಮನಿರದೆ ತಮ್ಮ ಜೀವನದಲ್ಲಿ ಮುಕ್ತಿಯನ್ನು ಕಂಡುಕೊಂಡುದ್ದನ್ನು 'ಕಂಕಣ'ದ ಮುಂದುವರೆದ ಭಾಗ 'ಮುಕ್ತಿ' ಕಾದಂಬರಿ ಚಿತ್ರಿಸುತ್ತದೆ.

ತ್ರಿವೇಣಿಯವರ ಇತರ ಕಾದಂಬರಿಗಳಿಗೆ ಹೋಲಿಸಿದರೆ, ಈ ಕಾದಂಬರಿಗಳು ಅನೇಕ ಅಂಶಗಳಲ್ಲಿ ಭಿನ್ನವಾದವುಗಳಾಗಿವೆ. ೧೯೫೭ರಲ್ಲಿ ಪ್ರಕಟಗೊಂಡ ಇವರ ಹನ್ನೊಂದನೆಯ ಕಾದಂಬರಿ ಕಂಕಣ ಹಾಗೂ ಮುಕ್ತಿ ಕಾದಂಬರಿಗಳ ಲಕ್ಷ್ಯ ಒಂದು ವ್ಯಕ್ತಿಯಲ್ಲದೆ ಇಡೀ ಸಮಾಜದ ವಿಸ್ತೃತ ಚಿತ್ರಣ ಅಂದರೆ ಮೊದಲ ಬಾರಿಗೆ ಈ ಕಾದಂಬರಿಗಳಲ್ಲಿ ಒಂದು ವಿಶಾಲ ನೆಲೆಯಲ್ಲಿ ಸ್ವಾತಂತ್ರ್ಯೋತ್ತರ ಭಾರತದ ತೀವ್ರವಾಗಿ ಬದಲಾಗುತ್ತಿರುವ ಸಾಮಾಜಿಕ ಸ್ಥಿತ್ಯಂತರಗಳನ್ನು ಮತ್ತು ಜೀವನಶೈಲಿಯನ್ನೂ ಸ್ತ್ರೀ ದೃಷ್ಟಿಕೋನದಿಂದ ದಾಖಲಿಸಲು ಪ್ರಯತ್ನಿಸಿದ್ದಾರೆ. ಸಂಕ್ರಮಣಕಾಲದ ಈ ಸಮಾಜದ ಮೌಲ್ಯಗಳನ್ನು ಪರೀಕ್ಷಿಸುವ ಮಾನದಂಡ ವಿವಾಹವೆಂಬ ಸಾಮಾಜಿಕ ಸಂಸ್ಥೆಯಲ್ಲಿ ಬಹುಪಾಲು ಸೋಲುವವರೇ ಎಂಬುದನ್ನು ಕಾದಂಬರಿ ಪ್ರತಿಪಾದಿಸುತ್ತದೆ. ಕಾದಂಬರಿಯ ಒಳನೋಟದಲ್ಲಿ ಸಂಕ್ರಮಣಕಾಲದ ಭಾರತೀಯ ಸಮಾಜದಲ್ಲಿ ಸ್ತ್ರೀಯ ಸ್ಥಾನಮಾನಗಳನ್ನು ಅರ್ಥಪೂರ್ಣವಾಗಿ ವಿಶ್ಲೇಷಿಸಿರುವುದನ್ನು ಗಮನಿಸಬಹುದು.

ಕಂಕಣದ ಮುಂದುವರೆದ ಭಾಗ 'ಮುಕ್ತಿ' ಕಂಕಣದಲ್ಲಿ ಅಪೂರ್ಣಗೊಂಡ ಆರು ಜನ ಹೆಣ್ಣು ಮಕಳ ಜೀವನದಲ್ಲಿ ಪೂರ್ಣತೆಯನ್ನು ತಂದುಕೊಡುವ ಉದ್ದೇಶದಿಂದ ಮುಕ್ತಿ ಕಾದಂಬರಿ ರಚನೆಯಾದಂತಿದೆ. ೧೯೫೯ರಲ್ಲಿ ಪ್ರಕಟವಾದ ಮುಕ್ತಿಯಲ್ಲಿ ಹಿಂದಿನ ಕಾದಂಬರಿಯ ಸೂಕ್ಷ್ಮ ಕೌಶಲ್ಯವಿಲ್ಲ. ಈ ಕೃತಿಯ ಕೇಂದ್ರದಲ್ಲಿಯೂ ವೈವಾಹಿಕ ಸಮಸ್ಯೆಯಿದ್ದರೂ ಕೃತಿಯಲ್ಲಿ ಹೆಚ್ಚಾಗಿ ನೇರ ಹೇಳಿಕೆಗಳನ್ನೂ ಹಾಗೂ ಚರ್ಚೆಯಿಂದ ಕೂಡಿದೆ. ಕಂಕಣದಲ್ಲಿ ರಮಾಳ ಕಥೆ ವಿಸ್ತೃತವಾಗಿರುವಂತೆ ಮುಕ್ತಿಯಲ್ಲಿ ಅಮೃತಾಳ ಕಥೆ ವಿಸ್ತಾರವಾಗಿ ನಿರೂಪಿಸುತ್ತಾರೆ. ಆರೂ ಜನ ಗೆಳತಿಯರು ವೈವಾಹಿಕ ಸಮಸ್ಯೆಯಿಂದ ತಮ್ಮದೇ ಆದ ಮಾರ್ಗಗಳಲ್ಲಿ 'ಮುಕ್ತಿ'ಯನ್ನು ಪಡೆಯುವುದು ಕಾದಂಬರಿ ವಸ್ತು.

ತ್ರಿವೇಣಿಯವರ ಕಾದಂಬರಿಗಳ ಪೈಕಿ ಚಿಕ್ಕದಾದರೂ ಹೆಚ್ಚು ಮೆಚ್ಚುಗೆ ಪಡೆದು ಆಕೆಗೆ ಖ್ಯಾತಿಯನ್ನು ತಂದುಕೊಟ್ಟ ಕಾದಂಬರಿ 'ಬೆಳ್ಳಿಮೋಡ', 'ಬೆಕ್ಕಿನ ಕಣ್ಣು' ಕಾದಂಬರಿಯ ಯಶಸ್ಸಿನಂತರ ತ್ರಿವೇಣಿ ಓದುಗರಿಂದ ಮತ್ತು ಪ್ರಕಾಶಕರಿಂದ ತುಂಬಾ ಬೇಡಿಕೆಯ ಪರಿಣಾಮವಾಗಿ, ವರ್ಷಕ್ಕೆ ಎರಡು ಕೆಲವೊಮ್ಮೆ ಮೂರು

ಕಾದಂಬರಿಗಳನ್ನು ಬರೆದರು. ಈ ಸಂದರ್ಭದಲ್ಲಿ ಅವರು ಬರೆದ ಅನೇಕ ಕಾದಂಬರಿಗಳು ಹಿಗ್ಗಿಸಿ ವಿಸ್ತರಿಸಿದ ಸಣ್ಣಕಥೆಗಳಂತೆ ಕಾಣುತ್ತವೆ. ಅಂತ ಒಂದು ಕಾದಂಬರಿ ೧೯೫೫ರಲ್ಲಿ ಪ್ರಕಟಗೊಂಡ ಕಾದಂಬರಿ `ಬೆಳ್ಳಿಮೋಡ'. ಅನಂತರದಲ್ಲಿ ಚಲನಚಿತ್ರವಾಗಿ ಹೊರಬಂದು ಅಪಾರ ಯಶಸ್ಸನ್ನು ಗಳಿಸಿತು. ನಿಷ್ಕಲ್ಮಷ ಹೃದಯದ ಹೆಣ್ಣಿನ ದುರಂತ ಈ ಕಾದಂಬರಿಯ ವಸ್ತು. ಹಣದಾಸೆಗೆ ಬಲಿಬಿದ್ದು, ಗಂಡು ಅರಿಯದ ಮುಗ್ಧ ಹೆಣ್ಣನ್ನು ವಂಚಿಸಿವುದು ಇಲ್ಲಿನ ಕಥೆ. ಪರಸ್ಪರ ಒಲಿವ ಗಂಡು–ಹೆಣ್ಣುಗಳನ್ನು ಒಂದುಗೂಡಿಸುವುದೇ ನಿಜವಾದ ಅರ್ಥದಲ್ಲಿ ಮದುವೆ. ಈ ವಿಷಯದಲ್ಲಿ ಗಂಡಿನಷ್ಟೇ ಹೆಣ್ಣಿಗೂ ಸ್ವತಂತ್ರ್ಯವಿದೆ ಎಂಬ ಸಮಾನತೆಯ ತತ್ವ ಕಾದಂಬರಿಯು ಒಳಗೊಂಡಿದೆ.

ಈ ಕಾದಂಬರಿಯಲ್ಲಿ ಚಿತ್ರಿತವಾಗಿರುವ ಕಾಫಿ ತೋಟ, ಎಸ್ಟೇಟಿನ ವರ್ಣನೆ, ಸಹಜಸುಂದರವಾಗಿದೆ, ಹಿತಮಿತವಾಗಿದೆ. ಪೋಷಕ ಪಾತ್ರಗಳು ಚಿಕ್ಕದಾಗಿ ಚೊಕ್ಕವಾಗಿವೆ. ಈ ಕಾದಂಬರಿಯ ಪರಿಣಾಮಕಾರಿ ಅಂತ್ಯ ಹಾಗೂ ವಿಶಿಷ್ಟ ಪಾತ್ರಚಿತ್ರಣ ಮತ್ತು ಕಥಾವಸ್ತುವಿನ ವಿನೂತನ ನಿರ್ವಹಣೆ ಇವುಗಳಿಂದಾಗಿ `ಬೆಳ್ಳಿಮೋಡ' ಒಂದು ವಿಶಿಷ್ಟ ಉತ್ತಮ ಕಾದಂಬರಿಯಾಗಿದೆ.

ಅನಂತರದಲ್ಲಿ ಸಾಲುಸಾಲಾಗಿ ಬರುವ ಕಾದಂಬರಿಗಳು ಬಾನು ಬೆಳಗಿತು, ವಸಂತಗಾನ, ಹೃದಯಗೀತ ಇವು ಯಾವ ಗಹನವಾದ ಸಮಸ್ಯೆಗಳನ್ನು ಒಳಗೊಳ್ಳದ ಕೇವಲ ಮನರಂಜನೆಯನ್ನು ನೀಡುವ ಕಾದಂಬರಿಗಳು. ಸಣ್ಣಕಥೆಗಾಗಬಹುದಾದ ವಸ್ತುವನ್ನು ಹಿಗ್ಗಿಸಿ ಕಾದಂಬರಿಗಳಾಗಿವೆ.

೧೯೫೫ರಲ್ಲಿ ಪ್ರಕಟಗೊಂಡ 'ಬಾನು ಬೆಳಗಿತು' ಕಾದಂಬರಿ ನವವಿವಾಹಿತ ದಂಪತಿಗಳ ನೋವು–ನಲಿವುಗಳನ್ನು ಪ್ರಮುಖವಾಗಿ ಚಿತ್ರಿಸುತ್ತದೆ. ಮದುವೆಯಾದ ಹೊಸತರಲ್ಲಿ ಗಂಡ–ಹೆಂಡಿರ ಪ್ರೀತಿಯ ಪ್ರದರ್ಶನ ಅತಿಯೆನಿಸುವಷ್ಟು ಇದ್ದದ್ದು, ಕಾಲಕ್ರಮದಲ್ಲಿ ಅವರ ವೈವಾಹಿತ ಹಾಗೂ ಲೈಂಗಿಕ ಜೀವನ ಯಾಂತ್ರಿಕವಾಗುತ್ತದೆ. ಪ್ರೇಮ ಬಿಸಿಯಾಗುವುದೂ ಬೇಗ, ಆರುವುದೂ ಬೇಗ, ಇದಕ್ಕೆ ಪ್ರತಿಯಾಗಿ ಕಲ್ಯಾಣಿಯ ಅತ್ತೆಮಾವಂದಿರ ಪ್ರೀತಿ, ಜೀವನದಲ್ಲಿ ಅವರಿಗಿರುವ ಶ್ರದ್ಧೆ ಆಸಕ್ತಿಗಳ ಚಿತ್ರಣವೂ ಚಿತ್ರಿತವಾಗಿದೆ. ಹಿರಿಯರಿಗೆ ಜೀವನದಲ್ಲಿರುವಷ್ಟು ಆಸಕ್ತಿ ಕಿರಿಯರಿಗೆ ಇಲ್ಲ ಎನ್ನುವುದನ್ನು ಲೇಖಕಿ ಇಲ್ಲಿ ಪ್ರತಿಪಾದಿಸಿದ್ದಾರೆ. ಒಟ್ಟಿನಲ್ಲಿ ಈ ಕಾದಂಬರಿ ಮನರಂಜನೆ ನೀಡಿ ಓದಿಸಿಕೊಂಡು ಹೋಗುವ ಸರಳ ಕೃತಿ.

ದಾಂಪತ್ಯ ಜೀವನದ ಪೂರ್ಣಸುಖವನ್ನು ಪಡೆದು, ಜೀವನದಲ್ಲಿ ತೃಪ್ತಿಯನ್ನು ತಂದುಕೊಂಡ ದಂಪತಿಗಳ ಕತೆಯನ್ನು 'ವಸಂತಗಾನ' ಕಾದಂಬರಿಯು ಚಿತ್ರಿಸುತ್ತದೆ. ಚೊಚ್ಚಲ ಗರ್ಭಿಣಿಯು ಒಂಬತ್ತು ತಿಂಗಳ ಅನುಭವವೇ ಈ ಕಾದಂಬರಿಯ ಹಂದರ. ವಸಂತಋತು ವರ್ಷಕ್ಕೊಮ್ಮೆ ಬರುತ್ತದೆ. ಅದನ್ನು ಸಂಭ್ರಮದಿಂದ ಬರಮಾಡಿಕೊಳ್ಳುತ್ತೇವೆ, ಆನಂದಿಸುತ್ತೇವೆ. ಆದರೆ ವಂಸತಗಾನ ಪ್ರತಿದಿನದ ವ್ಯವಹಾರವಾದರೆ ಆಸಕ್ತಿ ಕಡಿಮೆಯಾಗಿ ಬೇಸರವಾಗುತ್ತದೆ ಎಂಬುದನ್ನು ಕಾದಂಬರಿಯಲ್ಲಿ ಮನಗಾಣಬಹುದು.

ಕಾದಂಬರಿಯ ಗಾತ್ರಕ್ಕೆ ಅಳವಡದ ಕಥಾವಸ್ತುವನ್ನು ಲೇಖಕಿ ತಮ್ಮ ಹಾಸ್ಯದ ಹೊನಲನ್ನು ಹರಿಸಿ ಸಂಭಾಷಣೆಯ ಚಾತುರ್ಯದಿಂದ ಬೆಳೆಸಿಕೊಂಡು ಹೋಗಿದ್ದಾರೆ.

ಪ್ರೇಮವಿದ್ದಲ್ಲಿ ಸತಿಪತಿಯರ ಸುಖಕ್ಕೆ ವಯಸ್ಸಿನ ಅಂತರವೇನೂ ಅಡ್ಡಿಯಾಗುವುದಿಲ್ಲ, ಎಂಬ ಸಿದ್ಧಾಂತವನ್ನು 'ಹೃದಯಗೀತ' ಕಾದಂಬರಿಯಲ್ಲಿ ಪ್ರತಿಪಾದಿತವಾಗಿದೆ. ಪ್ರೇಮಕ್ಕೆ ಹಾಗೂ ವಿವಾಹಕ್ಕೆ ವಯಸ್ಸು, ಜಾತಿ, ಕುಲ, ದೇಶ, ಕಾಲ ಇವು ಯಾವುವೂ ಅಡ್ಡಿಯಾಗಲಾರವು ಎಂಬುದನ್ನು ಲೇಖಕಿ ಈ ಕಾದಂಬರಿಯಲ್ಲಿ ಪ್ರತಿಪಾದಿಸಿದ್ದಾರೆ.

ಮೂರ್ತಿ–ಪದ್ಮಿನಿ ಇವರ ಒಡನಾಟ, ಮಾತುಕತೆ, ಪದ್ಮಿನಿ ಮೂರ್ತಿಯವರ ಕಾರ್ ಡ್ರೈವಿಂಗ್ ಕಲಿಯುವಾಗ ಆಡುವ ಹುಡುಗಾಟವೆಲ್ಲಾ ಸಿನಿಮೀಯ ಎನಿಸುತ್ತದೆ. ಈ ಕಾದಂಬರಿ ಸಿನಿಮಾ ತಂತ್ರಕ್ಕೆ ಒಗ್ಗುವಂತೆ ಕಾಣುತ್ತದೆ. ಮೂರ್ತಿಗೆ ವಯಸ್ಸಾಗಿದ್ದರು ಅವನಲ್ಲಿ ಹುಡುಗುತನವಿತ್ತು. ಪದ್ಮಿನಿ–ಮೂರ್ತಿಯವರ ನಂಟು ಜನ್ಮ ಜನ್ಮಾಂತರದಿಂದ ಬಂದಿದ್ದು ಅದು ಈ ಜನ್ಮದಲ್ಲಿ ತಡವಾಗಿ ಬಂದಿದ್ದು ಎಂಬಂತಹ ಲೇಖಕಿಯ ಹೇಳಿಕೆಗಳು ಕಾದಂಬರಿಯ ವಸ್ತುವನ್ನು ಪೋಷಿಸಲಿಕ್ಕೆಂದೇ ಪ್ರತಿಪಾದಿಸಿದಂತೆ ಕಂಡುಬರುತ್ತದೆ.

"ಜನಸೇವೆಯೇ ಜನಾರ್ಧನನ ಸೇವೆ" ಎಂಬ ತತ್ವ ಪ್ರತಿಪಾದನೆ 'ಕಾಶೀಯಾತ್ರೆ' ಕಾದಂಬರಿಯಲ್ಲಿ ಚಿತ್ರಿತವಾಗಿದೆ. ವೃದ್ಧವಿಧವೆ ಜೀವನವೆಲ್ಲ ಕೂಡಿಟ್ಟ ಹಣದಿಂದ ಕಾಶೀಯಾತ್ರೆ ಮಾಡಬೇಕೆಂದುಕೊಂಡು ಕೊನೆಗೆ ತಬ್ಬಲಿ ಹುಡುಗಿ ಮಂಗಳೆಯ ಕನ್ಯಾದಾನಕ್ಕಾಗಿ ನೀಡುತ್ತಾಳೆ ಇದು ಕಾಶೀಯಾತ್ರೆ ಕಾದಂಬರಿಯ ವಸ್ತು ಕನ್ಯಾದಾನದ ಪೂಣ್ಯ ಕಾಶೀಯಾತ್ರೆಯ ಪುಣ್ಯಕ್ಕಿಂತ ದೊಡ್ಡದು" ಅಂದರೆ ಕಾದಂಬರಿಯಲ್ಲಿ ಒಳಗೊಂಡಿದೆ.

ಬಡತನದ ಬವಣೆಯನ್ನು ತಾಳಲಾರದೆ ತಂದೆ ತಾಯಿಗಳಿಂದ ದಾನವಾಗಿ ಕೊಡಲ್ಪಟ್ಟು ಶ್ರೀಮಂತರ ಮನೆ ಸೇರುವ ಹೆಣ್ಣೊಬ್ಬಳು ಇತ್ತ ಹೆತ್ತವರಿಂದ ದೂರವಾಗಿ ಅತ್ತ ಹೊಸ ವಾತಾವರಣಕ್ಕೆ ಹೊಂದಿಕೊಳ್ಳಲಾರದೆ ತೊಳಲಾಡುವ ಹೆಣ್ಣೊಬ್ಬಳ ಕಥೆ ಇದು 'ಅವಳ ಮನೆ' ಕಾದಂಬರಿಯ ವಸ್ತು.

ಈ ಕಾದಂಬರಿಯಲ್ಲಿ ಬರುವ ಸರೋಜಿನಿಯ ತಂದೆಯ ಬಡಸಂಸಾರದ ಚಿತ್ರಣ ಅತ್ಯಂತ ಸ್ವಾಭಾವಿಕವಾಗಿ ಮೂಡಿಬಂದಿದೆ. ಬಹುಸಂತಾನ, ಬಡತನ, ಆರ್ಥಿಕ ಹಾಗೂ ಸಾಮಾಜಿಕ ಸಮಸ್ಯೆಗಳ ಸುತ್ತ ಕೇಂದ್ರಿತವಾಗಿರುವ ಈ ಕಥೆಯು ಮೊದಲರ್ಧ ನಿಧಾನವಾಗಿ ಸಾಗಿ ಕೊನೆಯರ್ಧದಲ್ಲಿ ಆತುರಾತುರವಾಗಿ ಸಾಗಿ ಮುಕ್ತಾಯವಾಗುತ್ತದೆ.

ಅತ್ತಿಗೆ, ಮೈದುನ ನಿಷ್ಕಳಂಕ ಪ್ರೀತಿಯ ಅಡಿಪಾಯದ ಮೇಲೆ ರಚಿತವಾಗಿರುವ 'ತಾವರೆಯ ಕೊಳ' ವಿವಾಹೇತರ ಸಂಬಂಧವನ್ನು ವಸ್ತುವಾಗಿವುಳ್ಳ ಕಾದಂಬರಿ. ಮನುಷ್ಯ ಕೇವಲ ಅನ್ನ ನೀರು, ಗಾಳಿಯಿಂದಲೇ ಜೀವಿಸಲಾರ. ಜೀವನದಲ್ಲಿ ಅವನಿಗೆ ಪ್ರೀತಿ, ವಿಶ್ವಾಸ ಇವು ಅತ್ಯವಶ್ಯಕವಾಗಿ ಬೇಕು. ಇವು ಅವನ ಬಾಳಸಂಜೀವಿನಿ, ಇವುಗಳಿಂದಲೇ ಅವನ ಬಾಳು ಸುಖಮಯವಾಗಿ, ಸಂಪೂರ್ಣವಾಗಿ, ಚೆಲುವಾಗುತ್ತದೆ. ಹಾಗಾದಾಗಲೇ ಅವನು ಜೀವನದಲ್ಲಿ ಆಸಕ್ತಿಯನ್ನು ತಾಳುತ್ತಾನೆ ಎಂಬ ಅಂಶವು ಈ ಕಾದಂಬರಿಯಲ್ಲಿ ಸೂಚಿತವಾಗಿದೆ.

ತ್ರಿವೇಣಿಯವರ ಪೂರ್ಣ ಕೊನೆಯ ಕಾದಂಬರಿ 'ಹಣ್ಣೆಲೆ ಚಿಗುರಿದಾಗ' ಇದು ಅವರ ಮರಣಾನಂತರ ಪ್ರಕಟಗೊಂಡಿತು. ಈ ಕಾದಂಬರಿ ತ್ರಿವೇಣಿಯವರ ಇತರ ಕಾದಂಬರಿಗಳಿಗಿಂತ ಅನೇಕ ಅಂಶಗಳಲ್ಲಿ ಭಿನ್ನವಾಗಿದೆ. ಅವರ ಇತರ ಕಾದಂಬರಿಗಳು ಹೆಚ್ಚಾಗಿ ಕಥಾಪ್ರಧಾನವಾಗಿದ್ದರೆ ಇದು ಪಾತ್ರ ಪ್ರಧಾನವಾಗಿದೆ. ಈ ಕಾದಂಬರಿಯಲ್ಲಿ ನಿರೂಪಣಾ ಶೈಲಿಯಲ್ಲಿ ಹಾಸ್ಯ ಮತ್ತು ಗಂಭೀರ ಎರಡು ಒಂದನ್ನೊಂದು ಅರ್ಥಪೂರ್ಣವಾಗಿ ಹೆಣೆದುಕೊಂಡಿದೆ. ಕಾದಂಬರಿಯು ನಿವೃತ್ತರಾಗಿದ್ದ ರಾಯರ ಸಂಸಾರದ ಸುತ್ತ ರಚಿತವಾಗಿದೆ.

ಇಳಿವಯಸಿನ ರಾಯರಿಗೆ ಆರು ಮಕ್ಕಳಲ್ಲಿ ಮೊದಲಿನ ನಾಲ್ಕು ಮಕ್ಕಳಿಗೆ ಮದುವೆಯಾಗಿ ತಮ್ಮ ತಮ್ಮ ವೃತ್ತಿಯಲ್ಲಿ ಯಶಸ್ವಿಯಾಗಿದ್ದಾರೆ. ಉಳಿದ ಕೊನೆಯ ಮಗ, ಮಗಳಿಗೆ ಮದುವೆಯಾಗಿಲ್ಲ. ರಾಯರು ವಿಲಕ್ಷಣ ಮತ್ತು ದರ್ಪ ಸ್ವಭಾವದವರಾಗಿ ಅವರ ಮರೆಗೊಳಿತನ, ಹೆಂಡತಿ ಮಕ್ಕಳು ಮತ್ತು ಮೊಮ್ಮಕ್ಕಳೊಡನೆ ಅವರ

ಸಂಭಾಷಣೆಯಿಂದ ಎಲ್ಲರ ಮನಸ್ಸು ಸೆಳೆಯುವತ್ತ ಪಾತ್ರ ರಾಯರದು. ಕಾದಂಬರಿಯ ಮೊದಲರ್ಧ ಭಾಗದಲ್ಲಿ ರಾಯರ ಪಾತ್ರ ಚಿತ್ರಿತವಾಗಿದ್ದರೆ, ಕೊನೆಯ ಅರ್ಧದಲ್ಲಿ ಎರಡು ಗಂಭೀರ ವಿಷಯಗಳನ್ನೊಳಗೊಂಡಿವೆ.

ಮೂರು ತಲೆಮಾರಿನವರಲ್ಲಿ ಉಂಟಾಗುವ ವೈಪರೀತ್ಯಗಳ ಚಿತ್ರಣ ಅಂತರ್ಜಾತೀಯ ವಿವಾಹ ಹಾಗೂ ವಿಧವಾ ವಿವಾಹ ಈ ಸಮಸ್ಯೆಗಳನ್ನು ತ್ರಿವೇಣಿಯವರು ಈ ಕಾದಂಬರಿಯಲ್ಲಿ ತುಂಬ ಜಾಣ್ಮೆಯಿಂದ ಮತ್ತು ಪರಿಣಾಮಕಾರಿಯಾಗಿ ಚಿತ್ರಿಸಿದ್ದಾರೆ.

ತ್ರಿವೇಣಿಯವರ ಅಕಾಲ ಮರಣಕ್ಕೂ ಮೊದಲು ಒಂದು ಕಾದಂಬರಿ ಬರಹವನ್ನು ಆರಂಭಿಸಿ ಪೂರ್ಣವಾಗಿಸದೆ ಮರಣ ಹೊಂದಿದ್ದರು. ಅದು ಅರವತ್ತಾರು ಪುಟಗಳಷ್ಟು ರಚಿತವಾಗಿದ್ದ 'ಅವಳ ಮಗಳು' ಈ ಕಾದಂಬರಿಯನ್ನು ಶ್ರೀಮತಿ ಎಂ.ಸಿ. ಪದ್ಮಾ ಪೂರ್ಣಗೊಳಿಸಿದರೆಂದು ಮೊದಲೆ ಹೇಳಿದೆ.

ಹೆಣ್ಣೊಬ್ಬಳು ವಿವಾಹಪೂರ್ವದಲ್ಲೇ ಯುವಕನೊಬ್ಬನನ್ನು ಪ್ರೀತಿಸಿ ಬೇರೊಬ್ಬನ ಕೈಹಿಡಿದರೂ ಅವನ ಮೇಲಿನ ಪ್ರೀತಿ ಸಾಯದೆ ಕೊನೆಗೆ ಅವನನ್ನೇ ಸೇರುವ ಕಥೆ 'ಅವಳ ಮಗಳು' ಕಾದಂಬರಿಯ ಕಥಾವಸ್ತು.

ತೀರ ಸಾಧಾರಣ ವಸ್ತು, ಪಾತ್ರ ಹಾಗೂ ಶೈಲಿಯಿಂದ ಕೂಡಿರುವ ಈ ಕಾದಂಬರಿಯಲ್ಲಿ ಎತ್ತಿ ಹೇಳುವಂತಹ ವಿಶೇಷವೇನೂ ಕಂಡುಬರುವುದಿಲ್ಲ. ಕಾದಂಬರಿಯ ಮುಂದುವರಿಕೆಯಲ್ಲಿ ಪದ್ಮಾ ಅವರು ತ್ರಿವೇಣಿಯವರ ಶೈಲಿಯನ್ನು ಬಹುಮಟ್ಟಿಗೆ ಅನುಸರಿಸಲು ಪ್ರಯತ್ನಪಟ್ಟಿದ್ದಾರೆ.

ಸಾಮಾಜಿಕ ಸಮಸ್ಯೆಗಳನ್ನು ಪ್ರಮುಖ ವಸ್ತುವಾಗಿ ಹೊಂದಿರುವ ತ್ರಿವೇಣಿಯವರ ಹದಿನೇಳು ಕಾದಂಬರಿಗಳನ್ನು ಇದುವರೆಗೆ ಪರಿಶೀಲಿಸಲಾಗಿದೆ. ಹೆಣ್ಣಿನ ವಿವಿಧ ಸಮಸ್ಯೆಗಳನ್ನು ತ್ರಿವೇಣಿಯವರ ಕಾದಂಬರಿಗಳು ಮುಖ್ಯವಾಗಿ ಚಿತ್ರಿಸುತ್ತವೆ. ಇವರು ಕಾದಂಬರಿಗಳಲ್ಲಿ ತಾವು ಕಂಡು, ಕೇಳಿದ ಓದಿದ ಹಾಗೂ ಸೂಕ್ಷ್ಮವಾಗಿ ಅವಲೋಕಿಸಿದ ಸಮಾಜವನ್ನು ಸಾಮಾಜಿಕ ವ್ಯಕ್ತಿಗಳನ್ನು ಮತ್ತು ತಮ್ಮ ಅನುಭವಗಳನ್ನು ತಮ್ಮ ಕಥೆ, ಕಾದಂಬರಿಗಳ ಮೂಲಕ ತೆರೆದು ತೋರಿಸುವ ವಿಶ್ಲೇಷಿಸುವ ಪ್ರಾಮಾಣಿಕ ಪ್ರಯತ್ನವನ್ನು ಮಾಡಿದ್ದಾರೆಂಬುದನ್ನು ಇದುವರೆಗಿನ ಕಾದಂಬರಿಗಳ ಚರ್ಚೆಯಲ್ಲಿ ತಿಳಿಯಬಹುದು. ಮುಂದೆ ಮನೋವೈಜ್ಞಾನಿಕ ಸಮಸ್ಯೆಗಳನ್ನಾಧರಿಸಿ ರಚಿಸಿದ ಕಾದಂಬರಿಗಳನ್ನು ವಿಶ್ಲೇಷಿಸಬಹುದು.

**ಮನೋವೈಜ್ಞಾನಿಕ ಕಾದಂಬರಿಗಳು :**

ತ್ರಿವೇಣಿಯವರು ಮನೋವಿಶ್ಲೇಷಣಾತ್ಮಕ ಸಮಸ್ಯೆಗಳನ್ನು ಆಧರಿಸಿ ನಾಲ್ಕು ಕಾದಂಬರಿಗಳನ್ನು ಬರೆದಿದ್ದಾರೆ. ಅವು 'ಬೆಕ್ಕಿನ ಕಣ್ಣು', 'ದೂರದ ಬೆಟ್ಟ', 'ಮುಚ್ಚಿದ ಬಾಗಿಲು' ಮತ್ತು 'ಶರಪಂಜರ' ಇವುಗಳಲ್ಲಿ ಕೆಲವು ರೀತಿಯ ಮನೋವೈಪರೀತ್ಯಕ್ಕೆ ಕಾರಣಗಳು ಪರಿಣಾಮ, ಪರಿಹಾರಗಳನ್ನು ಚಿಕಿತ್ಸಕ ದೃಷ್ಟಿಯಿಂದ ರಚಿಸಿದ್ದಾರೆ.

'ಮನಃಶಾಸ್ತ್ರ' ಇದು ಪ್ರತ್ಯೇಕ ಅಧ್ಯಯನ ಕ್ಷೇತ್ರವಾಗುವ ಮೊದಲೇ ಸಾಹಿತ್ಯದಲ್ಲಿ ಸೇರಿಕೊಂಡಿತ್ತು. ಸಾಹಿತಿಯಾದವನು ಮನುಷ್ಯನ ಮನಸ್ಸನ್ನು ಅರ್ಥಮಾಡಿಕೊಂಡಿರಬೇಕು ಎಂಬುದು ನಮಗೆ ತಿಳಿದಿದೆ. ಸಾಹಿತ್ಯಕೃತಿಯಲ್ಲಿ ಪಾತ್ರಗಳ ಸ್ವಭಾವ, ನಡೆನುಡಿಯಲ್ಲಿ ಜೀವನವನ್ನು ಎದುರಿಸುವ ಅಥವಾ ಎದುರಿಸಲು ಹಿಂಜರಿಯುವ ಸ್ಥಿತಿ ಪ್ರಕಟವಾಗಬೇಕೆಂಬುದು ಗೊತ್ತಿದೆ.

ತ್ರಿವೇಣಿಯವರು ಮನಃಶಾಸ್ತ್ರದ ವಿದ್ಯಾರ್ಥಿಯಾದ್ದರಿಂದ ಮನಃಶಾಸ್ತ್ರವನ್ನು ಸಾಹಿತ್ಯದಲ್ಲಿ ಕರಗಿಸಿ ಹದವಾದ ಪಾಕದಲ್ಲಿ ಎರಕಹೊಯ್ದು ಸುಂದರ ಕಲಾಕೃತಿಯನ್ನು ಹೊರತೆಗೆಯುವಲ್ಲಿ ತ್ರಿವೇಣಿಯವರು ಯಶಸ್ವಿಯಾಗಿದ್ದಾರೆ. ಅದಕ್ಕೆ ನಿದರ್ಶನ 'ಬೆಕ್ಕಿನ ಕಣ್ಣು', 'ಶರಪಂಜರ' ಕಾದಂಬರಿಗಳು.

ತ್ರಿವೇಣಿಯವರ ಬಹು ಜನಪ್ರಿಯ ಹಾಗೂ ಮಹತ್ವದ ಮನೋವೈಜ್ಞಾನಿಕ್ಜ ಕಾದಂಬರಿ ಬೆಕ್ಕಿನ ಕಣ್ಣು ೧೯೫೫ರಲ್ಲಿ ಪ್ರಕಟವಾಯಿತು. ಮನೋವೈಜ್ಞಾನಿಕ ನೆಲೆಯಲ್ಲಿ ರಚನೆಗೊಂಡ ಈ ಕಾದಂಬರಿ ಓದುಗರ ಮನಮೆಚ್ಚುಗೆಗೆ ಪಾತ್ರವಾಗಿ ಅಪಾರ ಯಶಸ್ಸನ್ನು ಕಂಡಿತು.

ತಾಯಿಯ ಪ್ರೀತಿಯಿಂದ ವಂಚಿತಳಾಗಿ, ಬಲತಾಯಿಯ ಕ್ರೂರದೃಷ್ಟಿಗೆ ಬಿದ್ದು, ದ್ವೇಷಕ್ಕೆ ಬಲಿಯಾಗಿ, ಮನಸ್ಸಿನ ಶಾಂತಿಯನ್ನು ಕಳೆದುಕೊಂಡು ಮನೋವ್ಯಾಧಿಯಿಂದ ತೊಳಲುವ, ವಿಚಿತ್ರವಾಗಿ ವರ್ತಿಸುವ ಕಿಶೋರಿಯೊಬ್ಬಳ ಮನಕಲಕುವ ಬದುಕು 'ಬೆಕ್ಕಿನ ಕಣ್ಣು' ಕಾದಂಬರಿಯಲ್ಲಿ ಚಿತ್ರಿತವಾಗಿದೆ. ತ್ರಿವೇಣಿಯವರಿಗೆ ಅಪಾರ ಜನಪ್ರಿಯತೆಯನ್ನೂ, ಯಶಸ್ಸನ್ನೂ ತಂದುಕೊಟ್ಟ ಈ ಕೃತಿ ಹೊಸಗನ್ನಡ ಕಾದಂಬರಿ ಸಾಹಿತ್ಯಕ್ಕೆ ವಿನೂತನ ಕಾಣಿಕೆಯಾಗಿದೆ. ಮನೋವೈಜ್ಞಾನಿಕ ಮತ್ತು ಸಾಮಾಜಿಕ ಉದ್ದೇಶಗಳೆರಡನ್ನೂ ಸಾಧಿಸಿಕೊಳ್ಳುವಲ್ಲಿ ಈ ಕಾದಂಬರಿ ಸಂಪೂರ್ಣವಾಗಿ ಯಶಸ್ವಿಯಾಗಿದೆ.

'ದೂರದ ಬೆಟ್ಟ' ಹೆಣ್ಣೊಬ್ಬಳ ಜಾಗೃತಪ್ರಜ್ಞೆ ಮತ್ತು ಸುಪ್ತಚೇತನಗಳ ಘರ್ಷಣೆಯನ್ನು ಪರಿಣಾಮಕಾರಿಯಾಗಿ ಚಿತ್ರಿಸಿರುವ ಕಾದಂಬರಿ 'ದೂರದ ಬೆಟ್ಟ' ವ್ಯಕ್ತಿ ಹೊರಗಿನ ನೋಟಕ್ಕೆ ಎಲ್ಲಾ ಸರಿಯಾಗಿ ಇದ್ದಂತೆ ಕಂಡರೂ ಮನಸ್ಸಿನ ತೊಳಲಾಟ ಯಾರಿಗೂ ಗೋಚರವಾಗುವುದಿಲ್ಲ. ಅದು ದೂರದ ಬೆಟ್ಟದಂತೆ ಹತ್ತಿರ ಹೋದಾಗ ಮಾತ್ರ ಕಲ್ಲು ಮುಳ್ಳುಗಳು ಕಾಣುತ್ತವೆ ಇದು 'ದೂರದ ಬೆಟ್ಟ' ಕಾದಂಬರಿಯ ಹಂದರ.

ವಿಧಾವವಿವಾಹದ ಸಮಸ್ಯೆಯನ್ನು ಮನೋವೈಜ್ಞಾನಿಕ ನೆಲೆಯಲ್ಲಿ ತಂದು ಚಿತ್ರಿಸಿರುವ ತಂತ್ರ ವಿಶಿಷ್ಟವಾಗಿದೆ. ಇಲ್ಲಿಯೂ ಕೂಡ ಸಾಮಾಜಿಕ ಹಾಗೂ ಮನೋವೈಜ್ಞಾನಿಕ ಸಮಸ್ಯೆಗಳನ್ನು ಒಂದರೊಳಗೊಂದು ಬೆಸೆದು ಎರಡಕ್ಕೂ ಪರಿಹಾರವನ್ನು ಸೂಚಿಸುವ ಪ್ರಯತ್ನ ಈ ಕಾದಂಬರಿಯಲ್ಲಾಗಿದೆ.

'ಮುಚ್ಚಿದ ಬಾಗಿಲು' ಕಾದಂಬರಿ, ಸುಪ್ತಚೇತನದಲ್ಲಿ ಅಡಗಿರುವ ಆಶೆ–ಆಕಾಂಕ್ಷೆ, ದುಗುಡ, ತುಮುಲ, ಅಳುಕು ಇವುಗಳನ್ನು ವಸ್ತುವಾಗುಳ್ಳ ಈ ಕಾದಂಬರಿ ಮುಚ್ಚಿದ ಬಾಗಿಲಿನ ಹಿಂದಿರುವ ವಿಷಮ ಕತೆಗಳ ಕೂಗನ್ನು ಕೇಳಿಸುವ ಪ್ರಯತ್ನ ಈ ಕಾದಂಬರಿಯಲ್ಲಾಗಿದೆ. ಇದು ಸಾಹಿತ್ಯ ಕೃತಿಯಾಗುವುದಕ್ಕಿಂತ ಹೆಚ್ಚಾಗಿ ಮನೋರೋಗಿಗಳ 'ಕೇಸ್ ಹಿಸ್ಟರಿ'ಯಂತಿದೆ. ಬೇರೆ ಬೇರೆ ಕಾರಣಗಳಿಂದ ಮನೋರೋಗಕ್ಕೆ ತುತ್ತಾಗಿ ಹೋಗುತ್ತಿರುವ ಆರು ಮಂದಿ ರೋಗಿಗಳ ಹಿನ್ನೆಲೆ ಹಾಗೂ ಅವರ ಸಮಸ್ಯೆಗೆ ಸಲಹೆ ಹಾಗೂ ಪರಿಹಾರ ಮಾರ್ಗಗಳನ್ನು ಸೂಚನೆಯ ಚಿತ್ರಣ ಈ ಕಾದಂಬರಿಯಲ್ಲಿ ಕಾಣಬಹುದು. ಈ ಕಾದಂಬರಿ ಮಾನಸಿಕ ಚಿಕಿತ್ಸಾಲಯದ ಒಬ್ಬ ಮನಃಶಾಸ್ತ್ರಜ್ಞನಿಂದ ನಿರೂಪಿಸಲಾಗಿದೆ.

ಮಾನಸಿಕ ರೋಗ ಹಾಗೂ ರೋಗಿಗಳ ವಿವರಗಳೇ ತುಂಬಿರುವ ಈ ಕಾದಂಬರಿಯಲ್ಲಿ ಗಮನ ಸೆಳೆಯುವ ಅಂಶವೆಂದರೆ, ಬಿಡಿಬಿಡಿಯಾದ ಅನೇಕ ಕಥೆಗಳನ್ನು ಒಂದುಗೂಡಿಸುವ ಒಂದು ಚೌಕಟ್ಟಿನಲ್ಲಿ ಎಲ್ಲರ ಕಥೆಗಳನ್ನು ನಿರೂಪಿಸುವ ಮನೋವಿಜ್ಞಾನಿಯದು. ಇಲ್ಲಿ ಆ ವ್ಯಕ್ತಿಯದೇ ಆದ ಒಂದು ಕಥೆಯಲ್ಲಿ ಅವನ ಸಂಸಾರದ ಮತ್ತು ಅವನು ತನ್ನ ಹೆಂಡತಿ ಹಾಗೂ ಮಕ್ಕಳ ಸಮಸ್ಯೆಗಳನ್ನು ಎದುರಿಸುವ ಕಥೆ, ಈ ವ್ಯವಸ್ಥಿತ ಚೌಕಟ್ಟು ಯಾಂತ್ರಿಕವಾಗಬಹುದಿದ್ದ ನಿರೂಪಕನ ಪಾತ್ರವನ್ನು ಮಾನವೀಕರಿಸಿ, ಅವನನ್ನು ಮತ್ತು ಅವನ ಅನುಭವಗಳನ್ನು ಓದುಗರಿಗೆ ಹತ್ತಿರವಾಗಿಸುತ್ತಾರೆ.

೧೯೬೨ರಲ್ಲಿ ಪ್ರಕಟವಾದ 'ಶರಪಂಜರ' ತ್ರಿವೇಣಿಯವರ ಅತ್ಯಂತ ಯಶಸ್ವಿ ಕೃತಿ. ದೈಹಿಕವಾಗಿ ಅಶಕ್ತಳಾದಾಗ, ಸುಪ್ತವಾಗಿದ್ದ ಅಪರಾಧದ ಅಂಜಿಕೆಯೊಂದು ಜಾಗೃತಗೊಂಡಾಗ, ಮಾನಸಿಕ ರೋಗಿಯಾಗಿ,

ವೈದ್ಯರಿಂದ ಚಿಕಿತ್ಸೆ ಪಡೆದು ಮನೆಗೆ ಬಂದ ಮೇಲೆ ಸನ್ನಿವೇಶಗಳ ಒತ್ತಡದಿಂದ ಮತ್ತೆ ಹುಚ್ಚಳಾಗಿ ಆಸ್ಪತ್ರೆಯನ್ನು ಸೇರುವ ಹೆಣ್ಣಿನ ಹೃದಯ ವಿದ್ರಾವಕ ಚಿತ್ರಣವನ್ನು ಈ ಕಾದಂಬರಿಯಲ್ಲಿ ಕಾಣಬಹುದು. ಹುಚ್ಚು ಬಿಟ್ಟರೂ ಮತ್ತೆ ಹುಚ್ಚು ಹಿಡಿಸುವ ಕುಟುಂಬದಲ್ಲಿ ಹಾಗೂ ಸಮಾಜದ ಕಟುವಾದ ನಿಂದೆ, ಪಿಸುಮಾತು, ಅಪಮಾನ, ತಿರಸ್ಕಾರಗಳ ಬಾಣಗಳ ಪಂಜರದಲ್ಲಿ ಬಂಧಿತಳಾದ ಹೆಣ್ಣಿನ ಹೃದಯಸ್ಪರ್ಶಿ ಕೃತಿ ಶರಪಂಜರ. ಈ ಕಾದಂಬರಿ ದುರಂತಪ್ರಜ್ಞೆಯಿಂದ ಕೂಡಿದೆ. ನಿರೂಪಣ ಕೌಶಲ್ಯ ಮನೋಜ್ಞವಾಗಿದ್ದು ಕಾದಂಬರಿಯ ಸಾಫಲ್ಯಕ್ಕೆ ಕಾರಣವಾಗಿದೆ.

ಇದುವರೆವಿಗೂ ತ್ರಿವೇಣಿಯವರ ಸಾಮಾಜಿಕ ಸಮಸ್ಯೆಗಳನ್ನು ಪ್ರಮುಖ ವಸ್ತುವಾಗುಳ್ಳ ಕಾದಂಬರಿಗಳನ್ನು ಹಾಗೂ ಮನೋವೈಜ್ಞಾನಿಕ ಸಮಸ್ಯೆಗಳನ್ನು ವಸ್ತುವಾಗುಳ್ಳ ನಾಲ್ಕು ಕಾದಂಬರಿಗಳನ್ನು ವಿಶ್ಲೇಷಿಸಲಾಗಿದೆ. ಇಲ್ಲಿ ತ್ರಿವೇಣಿಯವರು ಹೆಣ್ಣಿನ ಸಾಮಾಜಿಕ ಸಮಸ್ಯೆಗಳ ಜೊತೆಗೆ ಅವಳ ಮನಸ್ಸಿನ ಆಳ ಅಗಲಗಳನ್ನು ಸಹಾನುಭೂತಿಯಿಂದ ಪ್ರಾಮಾಣಿಕವಾಗಿ ಚಿತ್ರಿಸಿದ್ದಾರೆ. ಕಾದಂಬರಿಗಳಲ್ಲಿ ಸಾಮಾಜಿಕ ಸಮಸ್ಯೆಗಳನ್ನು ವಸ್ತುವಾಗಿದೆ ಆ ಸಮಸ್ಯೆಯೊಂದಿಗೆ ಮನುಷ್ಯನ ಆಂತರಿಕ ಮನಸ್ಸಿನ ಸ್ಥಿತಿಯೊಂದಿಗೆ ಬೆಸೆಯುವುದು ತ್ರಿವೇಣಿಯವರ ಕಾದಂಬರಿ ಸಾಹಿತ್ಯದ ವೈಶಿಷ್ಟ್ಯವಾಗಿದೆ. ಆದ್ದರಿಂದಲೇ ಇವರ ಮನೋವೈಜ್ಞಾನಿಕ ಕಾದಂಬರಿಗಳು ಪ್ರಕಟಗೊಂಡೊಡನೆ ಅವುಗಳಿಂದ ಪ್ರಭಾವಿತರಾಗಿ ಅನೇಕ ಲೇಖಕ–ಲೇಖಕಿಯರು ಮನೋವೈಜ್ಞಾನಿಕ ಕಾದಂಬರಿಗಳನ್ನು ರಚಿಸಿದ್ದಾರೆ. ಅಲ್ಲದೆ ವಸ್ತುಗಳ ಆಯ್ಕೆ ಹಾಗೂ ನಿರೂಪಣಾ ಶೈಲಿಯಲ್ಲಿ ತ್ರಿವೇಣಿಯವರನ್ನು ಅನುಸರಿಸಿದ್ದಾರೆ.

ತ್ರಿವೇಣಿಯವರ ಕಾದಂಬರಿಗಳಲ್ಲೆಲ್ಲ ಹೆಣ್ಣು ಮುಖ್ಯವಾದುದರಿಂದ ಅವರಿಗೆ ಅವಕಾಶ ಸಿಕ್ಕಾಗಲೆಲ್ಲಾ ಹೆಣ್ಣಿನ ತಾಯ್ತನ, ತಾಯಿ–ಮಗುವಿನ ಸಂಬಂಧ, ಹೆಣ್ಣಿನ ಹಿರಿಮೆ, ತ್ಯಾಗ ಇವುಗಳನ್ನು ಮುಖ್ಯವಾಗಿ ಎತ್ತಿ ಹಿಡಿದಿದ್ದಾರೆ. ಅಲ್ಲದೆ ತ್ರಿವೇಣಿಯವರ ಕಾದಂಬರಿ ಪರಿಸರದಲ್ಲಿ ವಿದ್ಯಾರ್ಥಿ ಜೀವನ, ಕಾಲೇಜಿನ ವಾತಾವರಣ, ಜೈಲಿನ ಜೀವನ, ತರುಣಿಯರ ವಿವಿಧ ಸಮಸ್ಯೆಗಳು ವಿಧವಾ ಸಮಸ್ಯೆ, ವೇಶ್ಯಾಸಮಸ್ಯೆ, ಬಡತನ, ಬಹುಸಂತಾನ, ಅಂದಿನ ಕಾಮುಕತೆ, ಸ್ವಾರ್ಥ, ವಂಚನೆ, ಹೆಣ್ಣಿನ ಅನೀತಿ, ಅತೃಪ್ತಿ, ದೌರ್ಬಲ್ಯ, ಅತಿಭಾವುಕತೆ, ಸ್ವಾಭಿಮಾನ, ದಿಟ್ಟತನ, ಹೆಣ್ಣು–ಗಂಡಿನ ಪ್ರೀತಿ, ವಿಶ್ವಾಸ, ಮದುವೆ, ಒಲವಿನ ಸಂಸಾರ, ಅಲ್ಲದೆ ಮನುಷ್ಯನ ಮನಸ್ಸಿನ ವಿವಿಧ ಮುಖಗಳನ್ನು ಅವರ ವರ್ತನೆಯಲ್ಲಿನ ಸೂಕ್ಷ್ಮತೆ ಇವೇ ಮೊದಲಾದ ವಿಷಯಗಳು ಅವರ ಕಾದಂಬರಿಗಳಲ್ಲಿ ಪ್ರಮುಖವಾಗಿ ವಿಶ್ಲೇಷಣೆಗೆ ಒಳಗಾಗಿವೆ. ಗಂಭೀರವಾದ, ಘನವಾದ ವಸ್ತುಗಳನ್ನು

ಆಯ್ದುಕೊಂಡರೂ ಕೆಲವು ವೇಳೆ ಅವುಗಳ ಸರಳೀಕರಣದಿಂದಾಗಿ ಓದುಗರ ಮೇಲೆ ಗಾಢವಾದ ಪರಿಣಾಮವನ್ನುಂಟುಮಾಡುವುದಿಲ್ಲ. ವಸ್ತುಪ್ರತಿಪಾದನೆಯಲ್ಲಿರುವ ಈ ಕೊರತೆಯಿಂದಾಗಿ ಕೆಲವು ಕಾದಂಬರಿಗಳು ಓದುಗರನ್ನು ತಟ್ಟುವಲ್ಲಿ ವಿಫಲವಾಗಿವೆ.

ಇನ್ನು ಇವರ ಬರವಣಿಗೆ ವೈಶಿಷ್ಟ್ಯವನ್ನು ನೋಡುವುದಾದರೆ ತ್ರಿವೇಣಿಯವರ ಕಾದಂಬರಿಗಳನ್ನು ಒಂದು ಸಾಮಾಜಿಕ ಕಾದಂಬರಿಗಳು ಮತ್ತು ಮನೋವೈಜ್ಞಾನಿಕ ಕಾದಂಬರಿಗಳು ಎಂದು ವಿಂಗಡಿಸಬಹುದು. ಸಾಮಾಜಿಕ ಕಾದಂಬರಿಗಳಲ್ಲಿ ಬರುವ ಪಾತ್ರಗಳಲ್ಲಿ ವ್ಯಕ್ತಿಯ ಆಂತರಿಕ ಹೋರಾಟವೂ ಚಿತ್ರಿತವಾಗಿದ್ದರೆ, ಹಾಗೆಯೆ ಮನೋವೈಜ್ಞಾನಿಕ ಕಾದಂಬರಿಯಲ್ಲಿ ಸಾಮಾಜಿಕ ಸಮಸ್ಯೆಗಳ ಚಿತ್ರಿತವಾಗಿವೆ. ಆದ್ದರಿಂದ ಕಟ್ಟುನಿಟ್ಟಾಗಿ ಇದು ಸಾಮಾಜಿಕ ಕಾದಂಬರಿ ಇದು ಮನೋವೈಜ್ಞಾನಿಕ ಕಾದಂಬರಿಗಳೆಂದು ಹೆಸರುಕೊಟ್ಟು ಹೇಳುವುದು ಸಮಂಜಸವಲ್ಲವೆನಿಸಿದರು ಯಾವ ಸಮಸ್ಯೆಗೆ ಹೆಚ್ಚು ಒತ್ತು, ಪ್ರಾಮುಖ್ಯತೆ ಇದೆ ಎಂಬುವನ್ನೇ ಗಮನಿಸಿ ಅದರ ಆಧಾರದ ಮೇಲೆ ವಿಶ್ಲೇಷಣೆಯ ಅನುಕೂಲಕ್ಕಾಗಿ ಹೀಗೆ ವಿಭಾಗಿಸಬಹುದು.

**೧. ಸಾಮಾಜಿಕ ಕಾದಂಬರಿಗಳು :**

ತ್ರಿವೇಣಿಯವರ ಸಾಮಾಜಿಕ ಕಾದಂಬರಿಗಳು ನಿತ್ಯಜೀವನದಲ್ಲಿ ನಡೆಯುವ ಘಟನೆಗಳನ್ನು ಪಾತ್ರ ಮತ್ತು ಸಹಜ ವಸ್ತುವಿನೊಂದಿಗೆ ಜೋಡಿಸಿ ಕಥೆಯನ್ನು ಹೆಣೆಯುವುದು ಇವರ ಪ್ರಮುಖ ಉದ್ದೇಶವಾಗುತ್ತವೆ. ಇವರು ಸಾಮಾಜಿಕ ಸಮಸ್ಯೆಗಳನ್ನು ಪ್ರಮುಖವಾಗಿ ಒಳಗೊಳ್ಳುವ ಅವರ ಕಾದಂಬರಿಗಳು ಹದಿನೇಳು. ಅವು 'ಹೂವು ಹಣ್ಣು', 'ಅಪಸ್ವರ', ಅಪಜಯ, 'ಸೋತುಗೆದ್ದವಳು', 'ಮೊದಲಹೆಜ್ಜೆ', 'ಕೀಲುಗೊಂಬೆ', 'ಕಂಕಣ', 'ಮುಕ್ತಿ', 'ಬೆಳ್ಳಿಮೋಡ', ಬಾನು ಬೆಳಗಿತು', 'ಹೃದಯಗೀತೆ', 'ವಸಂತಗಾನ', 'ಅವಳ ಮನೆ', ಕಾಶೀ ಮಾತ್ರೆ', 'ತಾವರೆಕೊಳ', ಹಣ್ಣೆಲೆ ಚಿಗುರಿದಾಗ', 'ತಾವರೆಕೆಳ' ಮತ್ತು 'ಅವಳ ಮಗಳು', ಒಟ್ಟು ಹದಿನೇಳು ಕಾದಂಬರಿಗಳು.

**೨. ಮನೋವೈಜ್ಞಾನಿಕ ಕಾದಂಬರಿಗಳು :**

ತ್ರಿವೇಣಿಯವರ ಬರವಣಿಗೆಯ ವೈಶಿಷ್ಟ್ಯತೆಯ ಬಹುವಾಗಿ ಪ್ರಾಮುಖ್ಯತೆ ಪಡೆದಿರುವುದು ಈ ಮನೋವಿಶ್ಲೇಷಣಾತ್ಮಕ ಸಮಸ್ಯೆಗಳನ್ನು ಒಳಗೊಂಡ ಕಾದಂಬರಿಗಳ ರಚನೆಯಲ್ಲಿ ಈ ಬಗೆಯ ವಸ್ತುವನ್ನು ಆರಿಸಿಕೊಂಡಾಗ ಸ್ವಲ್ಪ ಎಚ್ಚರ ತಪ್ಪಿದ್ದರೂ ಕಾದಂಬರಿಯ ಕಲಾತ್ಮಕತೆ ಹಾಳಾಗುತ್ತದೆ. ವೈಜ್ಞಾನಿಕ ಮತ್ತು

ಕಲಾತ್ಮಕತೆ ಎರಡನ್ನು ಕೌಶಲ್ಯದಿಂದ ಹೆಣೆಯಬೇಕಾಗುತ್ತದೆ. ಇಲ್ಲದಿದ್ದರೆ ಕಾದಂಬರಿ ಬದುಕಿನ ಅನುಭವದ ಪ್ರತಿಬಿಂಬವಾಗುವುದರ ಬದಲು ವಿಜ್ಞಾನದ ವಿವರಗಳು ಶುಷ್ಕ ನಿರೂಪಣೆಗೆ ಸಾಧನವಾಗಿ ಬಿಡುತ್ತದೆ. ಬದುಕಿನ ಸಮಸ್ಯೆಯ ವಿಶ್ಲೇಷಣೆ ಹಾಗೂ ಮೌಲ್ಯ ಪ್ರತಿಪಾದನೆ ಇವು ಯಾವ ಕಾದಂಬರಿಯ ಉದ್ದೇಶವಾಗಿರುತ್ತದೆಯೋ ಅದು ಉತ್ತಮ ಕಲಾಕೃತಿಯಾಗಿ ಒಂದು ಯಶಸ್ವೀ ಮನೋವೈಜ್ಞಾನಿಕ ಕಾದಂಬರಿ ಮನಃಶಾಸ್ತ್ರದ ತತ್ವಗಳಿಗೆ ಬದ್ಧವಾಗಿರುತ್ತವೆ. ಅಲ್ಲದೆ ಕೇವಲ ಒಬ್ಬ ವ್ಯಕ್ತಿ ಅಧ್ಯಯನದ ಚರಿತ್ರೆಯಾಗಬಾರದು. ಆದರೆ ಅನೇಕ ಮನೋವೈಜ್ಞಾನಿಕ ಕಾದಂಬರಿಗಳು ಇವೆರಡರಲ್ಲಿಒಂದಲ್ಲ ಒಂದು ಮಾನದಂಡಕ್ಕೆ ಸೋಲುತ್ತವೆ. ಕಾದಂಬರಿಯಲ್ಲಿ ಚಿತ್ರಿಸಿರುವ ಘಟನೆಗಳು ಹಾಗೂ ವಿಶ್ಲೇಷಣೆಗಳು ಮನಃಶಾಸ್ತ್ರದ ನೆಲೆಯಲ್ಲಿ ನೈಜವಾಗಿಲ್ಲದಿದ್ದರೆ ನಮಗೆ ವಿಶ್ವಾಸನೀಯವೆನಿಸುವುದಿಲ್ಲ ಹಾಗೆ ಒಬ್ಬ ಮಾನಸಿಕ ವಿಕಲ್ಪದ ವ್ಯಕ್ತಿಯನ್ನು ಕುರಿತ ಬದುಕಿನ ವಿವರಗಳನ್ನು ಮಾನಸಿಕ ಅಸ್ವಸ್ಥತೆಯ ಲಕ್ಷಣಗಳನ್ನು ಅದರ ವಿಶ್ಲೇಷಣೆ ಮತ್ತು ಅದರ ಪರಿಹಾರ ಇವುಗಳನ್ನೇ ಕಾದಂಬರಿ ದಾಖಲಿಸಿದ್ದರೆ ಅದು ಓದುಗರ ಮನಸ್ಸನ್ನು ಮುಟ್ಟುವುದಿಲ್ಲ ಎಂಬುದು ನಮಗೆ ಗೊತ್ತಿದೆ. ಆದರೆ ತ್ರಿವೇಣಿಯವರ ಬೆಕ್ಕಿನ ಕಣ್ಣು ಮತ್ತು ಶರಪಂಜರ ಈ ಎಲ್ಲಾ ವೈಪರಿತ್ಯಗಳಿಂದ ತಪ್ಪಿಸಿಕೊಂಡು ಮಾದರಿ ಎನಿಸುವಂತೆ ರಚಿತವಾಗಿದೆ.

ಲೇಖಕಿಯರು ಮಾತ್ರವಲ್ಲ, ಲೇಖಕರು ಸಹ ಮನೋವೈಜ್ಞಾನಿಕ ವಸ್ತುವನ್ನು ಆಧರಿಸಿದ ಕಾದಂಬರಿ ಬರೆದಿಲ್ಲ. ಆದರೆ ತ್ರಿವೇಣಿಯವರು ಮನೋವೈಪರೀತ್ಯದ ಸಮಸ್ಯೆಗಳನ್ನು ಆಧರಿಸಿ ಕಾದಂಬರಿಗಳನ್ನು ಬರೆದದ್ದು ವಿಶೇಷ. ‘‘ಕನ್ನಡ ಕಾದಂಬರಿ ವಲಯಕ್ಕೆ ಮೊಟ್ಟಮೊದಲು ಯಶಸ್ವಿ ಮನೋವೈಜ್ಞಾನಿಕ ಕಾದಂಬರಿಗಳನ್ನು ಕೊಟ್ಟವರಲ್ಲಿ ತ್ರಿವೇಣಿಯವರು ಮೊದಲಿಗರು.

ತ್ರಿವೇಣಿಯವರು ನಿರ್ದಿಷ್ಟ ಉದ್ದೇಶವಿರಿಸಿಕೊಂಡೇ ಮನೋವೈಜ್ಞಾನಿಕ ಕಾದಂಬರಿಗಳನ್ನು ಬರೆದಿದ್ದಾರೆ. ಮನಃಶಾಸ್ತ್ರವು ಓದುಗರಿಗೆ ಹೊಸ ವಿಷಯ ಮನೋರೋಗಗಳ ಸ್ವರೂಪ, ಅವುಗಳ ಚಿಕಿತ್ಸಾಕ್ರಮ, ಮನೋರೋಗಿಗಳ ವಿಷಯದಲ್ಲಿ ಕುಟುಂಬ ಹಾಗೂ ಸಮಾಜದ ಕರ್ತವ್ಯ, ಹೊಣೆಗಾರಿಕೆ, ಮೊದಲಾದ ವಿಷಯಗಳನ್ನು ಜನಸಾಮಾನ್ಯರಿಗೆ ಅರ್ಥಮಾಡಿಸಬೇಕೆಂಬ ಕಾಳಜಿ ಅವರ ಬರವಣಿಗೆಯಲ್ಲಿ ಹೆಜ್ಜೆ ಹೆಜ್ಜೆಗೂ ವ್ಯಕ್ತವಾಗುತ್ತದೆ. ಬೆಕ್ಕಿನಕಣ್ಣು ಹಾಗೂ ಮುಚ್ಚಿದ ಬಾಗಿಲು ಕೃತಿಗಳಲ್ಲಿ ಮುಖ್ಯ ಕಥೆಯೊಂದಿದ್ದರೂ ಮನೋರೋಗಿಗಳ ಸಂಬಂಧಿಸಿದ ಸಕಲ ವಿವರಗಳನ್ನು ಉದ್ದೇಶಕ್ಕೆ ಕಥೆಯನ್ನು ಬಳಸಿಕೊಂಡಿರುವುದನ್ನು ಗಮನಿಸಬೇಕು. ದೆವ್ವಭೂತಗಳನ್ನು ಕುರಿತ ನಂಬಿಕೆ ಪ್ರಾಣಿಬಲಿಯಂಥ ಹಿಂಸಾಕ್ರಮಗಳನ್ನೇ ಮನೋರೋಗಿಗಳ

ಮೇಲೆ ಪ್ರಯೋಗಿಸುವ ಮೂಢನಂಬಿಕೆಗಳನ್ನು ತೊಡೆದು ಹಾಕಬೇಕೆಂಬುದು ತ್ರಿವೇಣಿಯವರ ಕಾಳಜಿಯಾಗಿದೆ. ಈ ಆಚರಣೆಗಳ ಅರ್ಥಹೀನತೆಯನ್ನು ಬೆಕ್ಕಿನಕಣ್ಣು ಕಾದಂಬರಿಯಲ್ಲಿ ಸವಿವರವಾಗಿ ಚಿತ್ರಿಸಿದ್ದಾರೆ. ಮನೋರೋಗಿಗೆ ಬೇಕಾದುದು ಮನೋವೈದ್ಯರಿಂದ ಚಿಕಿತ್ಸೆಯೆ ಹೊರತು ದೆವ್ವಬಿಡಿಸುವವರಿಂದಲ್ಲ ಎಂಬುದನ್ನು ಮನದಟ್ಟುವಂತೆ ಚಿತ್ರಿಸಿದ್ದಾರೆ. ಜನರಲ್ಲಿ ಅರಿವು ಮುಡಿಸಬೇಕೆಂಬ ಬದ್ಧತೆ ಅವರ ಬರವಣಿಗೆಯಲ್ಲಿ ನಿಚ್ಚಳವಾಗಿದೆ. ಮನೋವಿಜ್ಞಾನದಂಥ ಚಿಕಿತ್ಸೆಯ ವಿಷಯವನ್ನು ಹೇಗೆ ಕಥೆಯಾಗಿಸಬೇಕು ಮತ್ತು ಜನಸಾಮಾನ್ಯರಿಗೆ ಈ ಮೂಲಕ ಹೇಗೆ ತಿಳಿವು ನೀಡಬೇಕು ಎಂಬುದನ್ನು ತ್ರಿವೇಣಿ ಕಾದಂಬರಿಗಳು ಇಂದಿಗೂ ಮಾದರಿಯಾಗಿವೆ ಎಂದರೆ ತಪ್ಪಿಲ್ಲ. ಮನಶಾಸ್ತ್ರದ ಬಗ್ಗೆ ಆಳವಾದ ತಿಳುವಳಿಕೆ ಇರುವಂತೆಯೇ ಬದುಕಿನ ಬಗೆಗೂ ತ್ರಿವೇಣಿಯವರಿಗೆ ಆಳವಾದ ಕುತೂಹಲ ಮತ್ತು ವಯಸ್ಸಿಗೆ ಮೀರಿದ ಅನುಭವವಿದೆ ಎಂಬುದೂ ಗಮನಾರ್ಹ. ಹೀಗಾಗಿ ಮನೋರೋಗಿಗಳ ಕಥೆಗಳ ಹಿನ್ನೆಲೆಯಲ್ಲಿ ಸಮಾಜ ಹಾಗೂ ಕೌಟುಂಬಿಕ ಬದುಕಿನ ವಿವಿಧ ನೆಲೆಗಳು ಸಮಸ್ಯೆ ಹಾಗೂ ಜಟಿಲತೆಗಳನ್ನು ಅವರು ಅಷ್ಟೇ ಸಮರ್ಥವಾಗಿ ಚಿತ್ರಿಸಿದ್ದಾರೆ.

'ಬೆಕ್ಕಿನಕಣ್ಣು', 'ಮುಚ್ಚಿದಬಾಗಿಲು' – ಕಾದಂಬರಿಗಳಲ್ಲಿ ಒಬ್ಬ ಮನೋರೋಗಿಯ ಮುಖ್ಯ ಕಥೆ ಇದ್ದರೂ ಮನೋರೋಗದ ವಿವಿಧ ಮುಖಗಳನ್ನು ಪರಿಚಯಿಸುವ ಕೆಲಸವು ನಡೆದಿದೆ. ಸಾಮಾಜಿಕ ಹಾಗೂ ಕೌಟುಂಬಿಕ ದೌರ್ಜನ್ಯಗಳು ಬಹುತೇಕ ಹೆಣ್ಣು ಮಕ್ಕಳನ್ನು ಮನೋರೋಗಕ್ಕೆ ಮಾಡುತ್ತವೆ ಎಂಬುದು ಇಲ್ಲಿ ಮನವರಿಕೆಯಾಗುತ್ತದೆ. ಈ ಎರಡು ಕಾದಂಬರಿಗಳಲ್ಲಿ ನಮ್ಮ ಸಮಾಜ ಹಾಗೂ ಕುಟುಂಬಗಳಲ್ಲಿ ಸ್ತ್ರೀಯ ಸ್ಥಿತಿ, ಅವರ ಸಮಸ್ಯೆಗಳನ್ನು ನೋವುಗಳನ್ನೇ ಎಳೆ ಎಳೆಯಾಗಿ ಬಿಡಿಸಿಡುತ್ತಾರೆ. ಈ ರೋಗಿಗಳ ಬಗ್ಗೆ ಸಮಾಜ ಹಾಗೂ ಸಂಬಂಧಿಕರ ಹೊಣೆಗಾರಿಕೆಯನ್ನು ಸ್ಪಷ್ಟಪಡಿಸುತ್ತಾರೆ.

ತ್ರಿವೇಣಿಯವರ ಬರವಣಿಗೆಯ ಬಹುಮುಖ್ಯ ವೈಶಿಷ್ಟ್ಯವೆಂದರೆ ಅವರ ಬರವಣಿಗೆ ಕೇವಲ ಒಂದು ವರದಿಯಾಗುವುದಿಲ್ಲ. ಅಥವಾ ಮನಃಶಾಸ್ತ್ರಕ್ಕೆ ಸಂಬಂಧಿಸಿದ ಪರಿಭಾಷೆಯ ಶುಷ್ಕ ವಿವರಣೆಯಾಗುವುದಿಲ್ಲ. ಬದಲಾಗಿ ಅದೆಲ್ಲವೂ ಒಂದು ಅಚ್ಚುಕಟ್ಟಾದ ಕುತೂಹಲಕಾರಿಯಾದ ಕಥೆಯ ಹಂದರದಲ್ಲಿ ಅವಿಭಾಜ್ಯ ಅಂಗವಾಗಿ ಬರುತ್ತದೆ. ಬದುಕಿನ ಪ್ರತಿಯೊಂದು ವಿವರವನ್ನು ಸೂಕ್ಷ್ಮವಾಗಿ ಗಮನಿಸುವ ಹಾಗೂ ಅದನ್ನೇ ಕಥೆಗೆ, ಪೂರಕವಾಗಿ ಅಳವಡಿಸುವ ಅದ್ಭುತ ಕತೆಗಾರಿಕೆ ತ್ರಿವೇಣಿಯವರಲ್ಲಿ ಮಾತ್ರವೇ ಕಾಣುವಂಥದ್ದು ವ್ಯಕ್ತಿಯ ಮನಸ್ಸಿನ ಪದರು ಪದರುಗಳನ್ನು ಬಿಡಿಸಿಡುವ ಹಾಗೂ ಮನೋರೋಗದ ಸ್ಥಿತಿಗೆ ನೂಕುವ ಬದುಕಿನ

ಆಗುಹೋಗುಗಳನ್ನು ಹಂತಹಂತವಾಗಿ ಚಿತ್ರಿಸುವ ಒಂದು ಅಚ್ಚುಕಟ್ಟು ಶಿಸ್ತು ಹಾಗು ಕುಸೂರಿ ಕೆಲಸ ತ್ರಿವೇಣಿ ಬರವಣಿಗೆಯ ಮುಖ್ಯ ಆಕರ್ಷಣೆ.

ತ್ರಿವೇಣಿಯವರ ಬಹುತೇಕ ಕಾದಂಬರಿಗಳಲ್ಲಿ ಒಂದು ಶಿಸ್ತು ಬದ್ಧತೆ ಹಾಗೂ ಕಲಾವಂತಿಕೆಗಳು ಕಂಡುಬರುತ್ತವೆ. ಇತರ ಲೇಖಕಿಯರಂತೆ ಅವರಿಗೆ ಕಥೆ ಹೇಳುವುದಷ್ಟೇ ಮುಖ್ಯವಲ್ಲ. ಕಥೆ ಅವರಿಗೆ ಒಂದು ಚೌಕಟ್ಟು ಮಾತ್ರ. ಈ ಚೌಕಟ್ಟನೇ ಜೀವನಾನುಭವ ವೈಚಾರಿಕತೆ, ವ್ಯಕ್ತಿಯ ಒಳಿತಿನ ಚಿಂತನೆಗಳನ್ನೇ ತುಂಬುತ್ತಾರೆ. ಬರವಣಿಗೆಯಲ್ಲಿ ಒಂದು ಅಪೂರ್ವ ಸಂಯಮವಿರುವುದನ್ನು ತ್ರಿವೇಣಿಯವರಲ್ಲಿ ಮಾತ್ರವೇ ಕಾಣಬಹುದು. ಅವರು ಉದ್ದಾನುದ್ದದ ಸಂಭಾಷಣೆಗಳನ್ನು ಹೆಣೆದರೂ ಘಟನೆಗಳನ್ನು ವರ್ಣಿಸಿದರು. ಅದೆಲ್ಲವೂ ಕಥೆಗೆ ಪೂರಕವಾಗಿರುವುದೇ ಹೊರತು ಅನಾವಶ್ಯಕವಾಗಿರುವುದಿಲ್ಲ. ಮನೋರೋಗದ ಹಂತ ತಲುಪುವ ಬೆಕ್ಕಿನಕಣ್ಣಿನ ಕುಸುಮುಗಳ ಪರಿಸರದ ವರ್ಣನೆ ಇದಕ್ಕೆ ನಿದರ್ಶನ, ತಾವರೆಯ ಕೊಳದ ರವೇಶ ಹಾಗೂ ಅವನ ಅತ್ತಿಗೆಯ ವಾತ್ಸಲ್ಯಪೂರ್ಣ ಸಂಬಂಧದ ವಿವರಗಳೂ ಸಹ ರಮೇಶನ ಆನಂತರದ ವರ್ತನೆಗೆ ಪೂರಕವಾಗಿಯೇ ಬರುತ್ತವೆ. ಶರಪಂಜರದಲ್ಲಿ ಕಾವೇರಿಯ ಅತ್ಯಂತ ವಿಶಿಷ್ಟ ಸ್ವಭಾವಕ್ಕೂ ಮನೋರೋಗದ ನಂತರ ಅವಳು ಪಡೆಯುವ ಅನುಭವಕ್ಕು ಸಂಬಂಧವಿಲ್ಲದೇ ಇಲ್ಲ.

ಪ್ರೀತಿ, ಪ್ರಣಯ, ದುಃಖ, ಹಾಸ್ಯ, ವ್ಯಂಗ್ಯ ಮೊದಲಾದ ಭಾವನೆಗಳ ತ್ರಿವೇಣಿಯವರಲ್ಲಿ ಕಂಡುಬರುವ ಒಂದು ವೈಶಿಷ್ಟ್ಯ ಇನ್ನೂ ಸೌಂದರ್ಯ ಮಿಮಾಂಸೆಯ ವಿಷಯಕ್ಕೆ ಬಂದರೆ ತ್ರಿವೇಣಿಯವರಂತೆ ಯಾವ ಲೇಖಕಿ ಅಥವಾ ಲೇಖಕರು ಸಹ ಗಂಡು-ಹೆಣ್ಣಿನ ಸೌಂದರ್ಯವನ್ನು ವರ್ಣಿಸಿಲ್ಲ. ಚುರುಕಾದ ಸಂಭಾಷೆಣೆಗಳನ್ನು ಹೆಣೆಯುವಲ್ಲಿಯೂ ತ್ರಿವೇಣಿ ಎತ್ತಿದ ಕೈ ಇವರು ಕಾದಂಬರಿಯನ್ನು ಬರೆದು ಸುಮಾರು ಐವತ್ತು ವರ್ಷಗಳಿಗೂ ಹೆಚ್ಚು ಕಾಲ ಕಳೆದಿವೆ. ಆದರೂ ಅವರ ವರ್ಣನೆ, ಸಂಭಾಷಣೆಗಳಲ್ಲಿರುವ ಸೌಂದರ್ಯ, ತಾಜಾತನ ಮಾಸಿಲ್ಲ. ಇಂದಿನ ಪ್ರೇಮಿಗಳು ಸಹ ಹೀಗೆ ಮಾತಾಡಿಕೊಳ್ಳುತ್ತಾರೇನೋ ಎನಿಸುವಷ್ಟು ಈ ಮಾತುಕಥೆಗಳು ತಾಜಾತನದಿಂದ ಕೂಡಿವೆ.

ತ್ರಿವೇಣಿಯವರು ಯಾವುದೇ ಕಾದಂಬರಿಯನ್ನು ಕೈಗೆತ್ತಿಕೊಂಡರೂ ಆದರಲ್ಲಿ ಹಾಸ್ಯ, ಶೃಂಗಾರ, ಹಾಗೂ ವೈಚಾರಿಕತೆಗಳು ಸಮಸಮವಾಗಿ ಬೆರೆತಿರುತ್ತವೆ. ಜೀವನವನ್ನು ಕುರಿತಾದ ಚಿಂತನೆ ವಿಚಾರಗಳು ತ್ರಿವೇಣಿ ಕಾದಂಬರಿಗಳ ಬಹುಮುಖ್ಯ ಗುಣ. ಉದಾಹರಣೆಗೆ ಅವರ ತಾವರೆಯ ಕೊಳ' ಕಾದಂಬರಿ ಕಥೆಗಿಂತ ಹೆಚ್ಚಾಗಿ ಹುಟ್ಟು ಸಾವು ಹಾಗೂ ಗಂಡು-ಹೆಣ್ಣಿನ ಸಂಬಂಧಗಳ ವಿಶ್ಲೇಷಣೆಗಳಲ್ಲಿ ರಚಿಸಲ್ಪಟ್ಟ ಕಾದಂಬರಿ

ಅನಿಸಿದರೆ ಆಚ್ಚರಿಯಿಲ್ಲ. ರಮೇಶನ ಅತ್ತಿಗೆ ಶಾಂತಳ ಸಾವು ಸಾಯುವಾಗ ಬದುಕು ಸಾವಿನ ಕುರಿತು ಅವಳು ಆಡುವ ಮಾತುಗಳು ವೈದ್ಯ ವೃತ್ತಿಯ ಸೇವಾಕಾರ್ಯದ ಬಗ್ಗೆ ಅವಳ ದೃಷ್ಟಿಕೋನ, ಶಾಂತಳ ಸಾವಿನ ನಂತರ ಮೈದುನ ರಮೇಶನ ಚಿಂತನೆಗಳು ಮುಂಬಯಿಯಲ್ಲಿ ಶೇಷಾದ್ರಿಯ ಹೆಂಡತಿ ರತ್ನಳು ರಮೇಶನೊಂದಿಗೆ ನಡೆಸುವ ಸೌಂದರ್ಯ ಮೀಮಾಂಸೆ, ಪ್ರೀತಿ ಪ್ರೇಮಗಳನ್ನು ಕುರಿತ ಜಿಜ್ಞಾಸೆ ಬದುಕಿನಲ್ಲಿ ಕರ್ತವ್ಯಕ್ಕೆ ಕೊಡಬೇಕಾದ ಮಹತ್ವ ಬದುಕಿನಿಗಿಂತ ವಿಮುಖನಾದ ರಮೇಶನತ್ತ ಪುನಃ ಬದುಕಿನಡೆಗೆ ಕರ್ತವ್ಯದಡೆಗೆ ತಿರುಗಿಸುವ ರೀತಿ ಈ ಕಾರಣಗಳಿಂದಾಗಿ ತ್ರಿವೇಣಿಯವರ ಬರಹ ಅತ್ಯಂತ ತತ್ವಶಾಲಿಯಾಗುತ್ತದೆ.

ತ್ರಿವೇಣಿ ಕಾದಂಬರಿ ನಿರ್ಮಾಣದಲ್ಲಿ ತಮ್ಮದೇ ಆದ ಒಂದು ವಿಶಿಷ್ಟ ಶೈಲಿಯನ್ನು ಬಳಸಿ ಒಂದು ಸಂಪ್ರದಾಯ ನಿರ್ಮಾಣ ಮಾಡಿದ್ದಾರೆ. ಅವರ ಒಟ್ಟು ಕಾದಂಬರಿಗಳನ್ನು ಓದಿದಾಗ ಅಲ್ಲಿನ ಭಾಷೆ ಮತ್ತು ಶೈಲಿಯ ಬಳಕೆಯ ವಿಶಿಷ್ಟತೆಯನ್ನು ತಿಳಿಯಬಹುದು. ಒಟ್ಟಾರೆ ಕಾದಂಬರಿಗಳ ಜನಪ್ರಿಯವಾಗಲು ಕಾರಣವೇನು? ಅವರ ಯಶಸ್ವಿನ ಗುಟ್ಟೇನು? ಎಂಬುದನ್ನು ತಿಳಿಯ ಹೊರಟಾಗ ಅವರು ಉತ್ಸುಕತೆಯ ಧಾಟಿಯಲ್ಲಿ ಕಥೆ ಹೇಳುವ ಕಥೆಗಾರ್ತಿ ಜೊತೆಗೆ ಚುರುಕು, ಸರಳ ಹಾಗೂ ಆತ್ಮೀಯವಾಗಿ ಕೌಟುಂಬಿಕ ಸಂಭಾಷಣೆ ಅವರ ಕಾದಂಬರಿಗಳ ಪ್ರಮುಖ ಆಕರ್ಷಣೆ, ತಿಳಿಯಾದ ಶೈಲಿ ಆಡು ಮಾತಿನ ಸೊಗಡಿನಿಂದ ಕೂಡಿದ ಸಹಜ ಸುಂದರವಾದ ಭಾಷೆ ಅವರದು. ತಾರುಣ್ಯದ ಕೋಮಲವಾದ ಭಾವನೆಗಳನ್ನು ನವಿರು ನವಿರಾಗಿ ಬಿಡಿಸಿ ತೋರಿಸುವ ಜಾಣ್ಮೆ ಅವರದು. ಪದಗಳ ಆಟ ಅನಗತ್ಯ ಭಾಷಣದಿಂದ ಓದುಗರಲ್ಲಿ ನಿರಾಸಕ್ತಿ ಉಂಟುಮಾಡುವುದಿಲ್ಲ. ಶೃಂಗಾರ ವರ್ಣನೆಯಲ್ಲಿ ಅಶ್ಲೀಲವಿರದೆ ಸಂಯಮದಿಂದ ಕೂಡಿದ ಸಹಜತೆ ಇದೆ. ಹಿತಮಿತವಿದೆ ಸಂಕೋಚ ಪ್ರವೃತ್ತಿ ಇದೆ. ಯಾವುದೂ ಅತಿರೇಕವೆನಿಸುವುದಿಲ್ಲ. ತ್ರಿವೇಣಿ ಜೊತೆಗೆ ಓದುಗರ ಮನಸ್ಸನ್ನು ತಬ್ಬುವ ಮಿಡಿಯುವ ಮಾರ್ದವತೆಯು ಇದೆ. ಇವುಗಳಿಂದಾಗಿ ಅವರ ಕಾದಂಬರಿಗಳ ಓದು ಹಗುರವೆನಿಸುತ್ತದೆ. ಪ್ರಯಾಸವೇ ವಿಲ್ಲದೆ ಒಮ್ಮಲೇ ಓದಿಸಿಕೊಂಡು ಹೋಗುವ ಆಕರ್ಷಣೆಯನ್ನು ಹೊಂದಿದೆ. ಓದುಗರು ಕಾದಂಬರಿಯ ಸನ್ನಿವೇಶಗಳು ತಮ್ಮ ಸುತ್ತಲೇ ನಡೆಯುತ್ತಿವೆ. ನಾವು ಅಲ್ಲಿನ ಪಾತ್ರಗಳಲ್ಲಿ ಇದ್ದೇವೆ ಎಂಬ ಭಾವನೆ ಮೂಡಿಸಿ ಹಾಸ್ಯ ಸನ್ನಿವೇಶದಲ್ಲಿ ಮುಖದಲ್ಲಿ ನಗೆ ಮೂಡಿಸುತ್ತದೆ. ದುರಂತ ಸನ್ನಿವೇಶದಲ್ಲಿ ನಮಗೆ ತಿಳಿಯದೆ ಕಣ್ಣಲ್ಲಿ ಹನಿಗೂಡುತ್ತದೆ. ಕೆಲವು ಪಾತ್ರಗಳು ಸಮಸ್ಯೆಯನ್ನು ತಮ್ಮದೇ ಸಮಸ್ಯೆಯೇನೋ ಎನ್ನುವಂತೆ ಆಲೋಚನೆಯಲ್ಲಿ ತೊಡಗಿಸುವಂತಿವೆ. ಮತ್ತೆ ಕೆಲವು ತಮ್ಮನ್ನು

ತಿದ್ದುಕೊಳ್ಳುವಷ್ಟು ಪರಿಣಾಮಕಾರಿ ಎಂದೆನಿಸುತ್ತವೆ. ಇವೆಲ್ಲ ಅವರ ಕಾದಂಬರಿಗಳ ಜನಪ್ರಿಯತೆಗೆ ಕಾರಣವಾದ ಅಂಶಗಳೆನ್ನಬಹುದು.

ತ್ರಿವೇಣಿಯವರಲ್ಲಿ ಕಂಡುಬರುವ ಸಾಮಾನ್ಯ ಅಂಶವೆಂದರೆ ಸಮೂಹ, ದೃಶ್ಯ ಚಿತ್ರಣ, ಇಂತಹ ದೃಶ್ಯಗಳಲ್ಲಿ ಅವರ ನಿರೂಪಣಾ ಕೌಶಲ್ಯ ಎದ್ದು ಕಾಣುತ್ತದೆ. ಅವರ ಮನೋವೈಜ್ಞಾನಿಕ, ಕಾದಂಬರಿಗಳು, 'ಕೀಲುಗೊಂಬೆ', 'ಮೊದಲ ಹೆಜ್ಜೆ' 'ಕಂಕಣ', ಮುಂತಾದ ಕಾದಂಬರಿಗಳ ಮುಕ್ತಾಯದ ದೃಶ್ಯ ಒಂದು ಆಸ್ಪತ್ರೆಯಲ್ಲಿಯೇ ಅಥವಾ ಜೈಲು ಶಾಲಾ ತರಗತಿಯಲ್ಲಿಯೇ ಇರುತ್ತದೆ. ದೃಶ್ಯಗಳಲ್ಲಿ ಲೇಖಕಿಯು ಸರಾಗವಾಗಿ ಒಂದು ಪಾತ್ರದಿಂದ ಮತ್ತೊಂದಕ್ಕೆ, ಅನುಭವದ ಒಂದು ಮುಖದಿಂದ ಮತ್ತೊಂದಕ್ಕೆ ಚಲಿಸುತ್ತಾ ಬದುಕಿನ ವ್ಯಾಪಕ ಚಿತ್ರಣವನ್ನು ಕೊಡುವುದು ಅವರ ವೈಶಿಷ್ಟ್ಯವಾಗಿದೆ. 'ಮೊದಲ ಹೆಜ್ಜೆ'ಯಲ್ಲಿ ನಿರೂಪಕಿಯಾಗಿ ದಾದಿ ಕಾದಂಬರಿಯನ್ನು ಪ್ರವೇಶಿಸಿದಾಗ, ಅವಳ ಮುಖಾಂತರ ಅತ್ಯಂತ ನೈಜವಾಗಿ ಲೇಖಕಿ ವಾರ್ಡ್‌ನಲ್ಲಿರುವ ವಿವಿಧ ರೋಗಿಗಳ ಮತ್ತು ಅವರ ವೈವಿಧ್ಯಪೂರ್ಣ ಅನುಭವಗಳನ್ನು ಕೊಡುತ್ತಾರೆ. ಆಸ್ಪತ್ರೆ, ಜೈಲು, ಹೊರಗಿನ ಪ್ರಪಂಚದ ಪ್ರತಿಬಿಂಬ ಆದರಿಂದ ಹೊರ ಜಗತ್ತಿನ ಸಾಮಾಜಿಕ-ಆರ್ಥಿಕ ತಿಕ್ಕಾಟಗಳಿಂದ ಅವು ದೂರವಾಗಿರಲು ಸಾಧ್ಯವಿಲ್ಲ. ನಾವು ಹೊರ ಜಗತ್ತಿನಲ್ಲಿ ಏನು ಕಾಣುತ್ತೇವೋ ಅದನ್ನೇ ಆಸ್ಪತ್ರೆ ಹಾಗೂ ಜೈಲಿನ ಒಳಗೂ ಕಾಣುತ್ತೇವೆ. ಈ ಕಾದಂಬರಿಯಲ್ಲಿ ಆಸ್ಪತ್ರೆ ಹಾಗೂ ಜೈಲಿನ ಜೀವನದ ಬಗ್ಗೆ ನೈಜ ಚಿತ್ರಣವಾಗಿಸಿದ್ದಾರೆ.

ತ್ರಿವೇಣಿಯವರ ಕಾದಂಬರಿಯಲ್ಲಿನ ಮತ್ತೊಂದು ವೈಶಿಷ್ಟ್ಯವೆಂದರೆ ಒಂದು ಸಿದ್ಧವಾದ ಚೌಕಟ್ಟಿನಲ್ಲಿ ಅಚ್ಚುಕಟ್ಟಾಗಿ ಕಥೆಯನ್ನು ನಿರೂಪಿಸುವ ತಂತ್ರ ವಿಶೇಷವಾಗಿದೆ. ನೇರವಾದ ಕಥನ ಮಾರ್ಗವನ್ನು ಅನುಸರಿಸದೆ ವ್ಯವಸ್ಥಿತ ರೀತಿಯಲ್ಲಿ ಕಥೆಯನ್ನು ನಿರೂಪಿಸುವ ಕಲೆ ಅವರಲ್ಲಿ ಕರಗತವಾಗಿದೆ. ಆವರ ಕಾದಂಬರಿಗಳಲ್ಲಿ ಗಮನಿಸಿದರೆ ರಚನಾ ಶೈಲಿಯಲ್ಲಿ, ನಿರೂಪಣಾ ವಿಧಾನದಲ್ಲಿ ಮೊದಲ ಕಾದಂಬರಿಯಿಂದ, ಕಡೆಯ ಕಾದಂಬರಿಯವರೆಗೆ ಹೆಚ್ಚಾಗಿ ಬೆಳೆದಂತೆ ಕಂಡುಬರುವುದಿಲ್ಲ. ಇದಕ್ಕೆ ಕಾರಣ ಅವರು ಇನ್ನೂ ಸಾಧನೆಯ ಹಾದಿಯಲ್ಲಿ ಕೆಲವು ಪರ್ಲಾಂಗುಗಳು ಮಾತ್ರ ಚಲಿಸಿದ್ದರು. ಆದರೂ ಕೆಲವು ಕಾದಂಬರಿಗಳನ್ನು ಪ್ರಯೋಗಾತ್ಮಕವಾಗಿ ರಚಿಸಿದ್ದಾರೆ.

ತಮ್ಮ ಸುತ್ತಮುತ್ತ ಕಂಡ ಬದುಕನ್ನು, ತಮ್ಮ ನೆರೆಹೊರೆಯ ವ್ಯಕ್ತಿಗಳನ್ನು ಹಾಗೂ, ತಾವು ನೋಡಿದ ತಮಗೆ ಹೆಚ್ಚು ಪರಿಚಯವಿದ್ದ ಸ್ಥಳಗಳನ್ನು ಅವರು ತಮ್ಮ ಕಾದಂಬರಿಗಳಲ್ಲಿ ಚಿತ್ರಿಸಿದ್ದಾರೆ. ಹೆಚ್ಚೂ ಕಡಿಮೆ

ಅವರ ಬಹುಮಟ್ಟಿಗಿನ ಕಾದಂಬರಿಗಳು ನಡೆಯುವ ಸ್ಥಳ ಅವರಿಗೆ ಅಚ್ಚುಮೆಚ್ಚಿನ ತವರೂರಾದ ಮೈಸೂರು ಅದರಲ್ಲೂ ಕೃಷ್ಣಮೂರ್ತಿಪುರ, ಮೈಸೂರು ಬಿಟ್ಟರೆ ಬೆಂಗಳೂರಿನ ಚಿತ್ರಣವಿದೆ. ಬೆಂಗಳೂರಿನ ವರ್ಣನೆ ಮಾನಸಿಕ ಆರೋಗ್ಯ ಕೇಂದ್ರದ ಪರಿಸರ ಜೈಲಿನ ವಾತಾವರಣ, ಬಿಟ್ಟರೆ, ಅಷ್ಟೇನು ದಟ್ಟವಾದ ಚಿತ್ರಣ ಕಂಡುಬರುವುದಿಲ್ಲ. ಇವರ ಹೆಚ್ಚು ಕಾದಂಬರಿಗಳಲ್ಲಿ ಮೈಸೂರಿನ ಚಿತ್ರಣವಿದೆ. ಮೈಸೂರಿನ ಮೆಡಿಕಲ್ ಕಾಲೇಜಿನ ಚಿತ್ರಣ 'ಮುಕ್ತಿ' ಕಾದಂಬರಿಯಲ್ಲಿ ಸಹಜವಾಗಿ ನೀಡಿದ್ದಾರೆ. ಆದರೂ ಹೊರ ರಾಜ್ಯದ ಸ್ಥಳಗಳ ಚಿತ್ರಣವನ್ನು ಗಮನೀಯುವಾಗಿ ಚಿತ್ರಿಸಿದ್ದಾರೆ. 'ಮುಕ್ತಿ', ತಾವರೆ ಕೊಳ' ಕಾದಂಬರಿಗಳ ಸ್ಥಳವನ್ನು ಮೈಸೂರಿನಿಂದ ಬೊಂಬಾಯಿಗೆ ವರ್ಗಾಯಿಸಿದ್ದಾರೆ. 'ಕಂಕಣ'ದಲ್ಲಿ ಊಟಿಯ ಪರಿಚಯವಿದೆ. 'ಬೆಳ್ಳಿಮೋಡ' ಕಾದಂಬರಿಯಲ್ಲಿ ಚಿಕ್ಕಮಗಳೂರಿನ ಕಾಫಿ ಎಸ್ಟೇಟಿನ ಸುಂದರ ಪರಿಸರವ ವರ್ಣನೆಯಿದೆ. ತ್ರಿವೇಣಿಯವರು ತಾವು ನೋಡಿದ ಸ್ಥಳಗಳನ್ನು ತಮ್ಮ ಕಾದಂಬರಿಗಳಲ್ಲಿ ಔಚಿತ್ಯಪೂರ್ಣವಾಗಿ, ಸಂದರ್ಭಾನುಸಾರವಾಗಿ ಪರಿಚಯಿಸಿದ್ದಾರೆ.

ತ್ರಿವೇಣಿಯವರು ಕೆಲವು ಕಾದಂಬರಿಗಳಲ್ಲಾದರೂ ಒಂದು ವಿಶಿಷ್ಟ ತಂತ್ರವನ್ನು ಬಳಸಿದ್ದಾರೆ. ಅವರ ವಿಶಿಷ್ಟ ನಿರೂಪಣ ಶೈಲಿಗೊಂದು ಉದಾಹರಣೆ 'ಮೊದಲ ಹೆಜ್ಜೆ' ಈ ಕಾದಂಬರಿಯಲ್ಲಿ ಪಾತ್ರಗಳ ಮೂಲಕ ಕತೆಯನ್ನು ಆಕರ್ಷಕವಾಗಿ ನಿರೂಪಿಸಿಕೊಂಡು ಹೋಗಿದ್ದಾರೆ. ಉತ್ತಮ ಪುರುಷದಲ್ಲಿ ಕಥಾನಾಯಕಿಯಿಂದ ನಿರೂಪಿತವಾಗಿರುವ ಇಲ್ಲಿನ ಕಥನ ವಿಧಾನ ವಿಶಿಷ್ಟವಾಗಿದೆ. ಇದಕ್ಕೆ ನಿದರ್ಶನವಾಗಿ ಕೆಳಗಿನ ಉಲ್ಲೇಖಗಳನ್ನು ನೋಡಬಹುದು.

ತ್ರಿವೇಣಿಯವರ ಬಹುಪಾಲು ನಾಯಕಿಯರು ಅತಿ ಸಾಮಾನ್ಯರೂಪಿನವರು. ಹತ್ತು ಜನರಲ್ಲಿ ಸುಲಭವಾಗಿ ಬೆರೆತುಹೋಗುವಂತಹವರು. ಆದರೆ ಕೆಲವರು ಮಾತ್ರ ಸುರಸುಂದರಿಯರು. ಅಂಥ ರೂಪಿಸಿಯರು 'ಹೂವು ಹಣ್ಣು' ವಿನ ರಮಾ, 'ಸೋತುಗೆದ್ದವಳು' ವಿನ ಭಾರತಿ, 'ಅಪಸ್ವರ'ದ ಮೀರ, 'ಶರಪಂಜರ'ದ ಕಾವೇರಿ ಮೊದಲಾದವರು. ಇವರು ಒಂದಲ್ಲ ಒಂದು ಚಿಂತೆಯಿಂದ ನರಳುತ್ತಾರೆ. ಮತ್ತೆ ಕೆಲವು ನಾಯಕಿಯರಿಗೆ ರೂಪವಿಲ್ಲದಿದ್ದರೂ ಹತ್ತು ಜನರನ್ನು ಆಕರ್ಷಿಸುವ ವ್ಯಕ್ತಿತ್ವ ದಿಟ್ಟತನ, ಜಾಣ್ಮೆ ಇರುತ್ತವೆ. ತ್ರಿವೇಣಿಯವರು ವ್ಯಕ್ತಿಗಿಂತಲೂ ವ್ಯಕ್ತಿತ್ವಕ್ಕೆ ಪ್ರಾಶಸ್ತ್ಯ ನೀಡಿದ್ದಾರೆ. ರೂಪ, ಬಣ್ಣಕ್ಕಿಂತಲೂ ಹೆಣ್ಣಿನ ಗುಣ, ಹೃದಯ ವೈಶಾಲ್ಯತೆಗೇ ಅವರು ಹೆಚ್ಚು ಪ್ರಾಮುಖ್ಯತೆ ನೀಡಿದ್ದಾರೆ. ಅದೇ ರೀತಿಯಲ್ಲಿ ಅವರು ವ್ಯಕ್ತಿಗಳನ್ನು ಚಿತ್ರಿಸಿದ್ದಾರೆ.

ತ್ರಿವೇಣಿಯವರು ವ್ಯಕ್ತಿ ಚಿತ್ರಣದ ರೀತಿಗೆ 'ಹೃದಯಗೀತ'ದ ಮೂರ್ತಿಯ ಪಾತ್ರವನ್ನು ಗಮನಿಸಬಹುದು. "ಗೀತಳ ತಂದೆಯೆಂದರೆ ಪದ್ಮಿನಿ ಒಂದು ಚಿತ್ರವನ್ನು ಕಲ್ಪಿಸಿಕೊಂಡಿದ್ದಳು. ಗಿಡ್ಡವ್ಯಕ್ತಿ, ಬಟ್ಟತಲೆ, ತಲೆಯ ಹಿಂಭಾಗದಲ್ಲಿ ನರೆತ ಸ್ವಲ್ಪ ಕೂದಲು, ಬಿಳಿದಾಗುತ್ತಿದ್ದ ಮೀಸೆ, ಬೊಜ್ಜು ಮೈ, ಪ್ರಧಾನವಾಗಿ ಕಾಣುವ ಹೊಟ್ಟೆ, ಕೆಂಪು ಕಣ್ಣುಗಳು, ಪುಂಡು ಮುಖ, ದಪ್ಪಗಾಜಿನ ಕನ್ನಡಕದ ವ್ಯಕ್ತಿಯ ಚಿತ್ರವೊಂದು ಅವಳ ಚಿತ್ರ ಭಿತ್ತಿಯ ಮೇಲೆ ನಿಂತಿತ್ತು. ಆದರೆ ಎದುರಿಗಿರುವ ವ್ಯಕ್ತಿ?

"ನೋಡಿದ ಕೂಡಲೇ ಒಳ್ಳೆಯ ಆಟಗಾರನಿರಬಹುದೆಂದು ಹೇಳಬಹುದಾದ ಕಪ್ಪುಗೂದಲಿನ ಕ್ರಾಪ್, ಸೌಮ್ಯ ಮು..."

"ಗೀತಳ ಅಣ್ಣನಿರಬಹುದು ಎಂದಿತು. ಮನಸ್ಸು... ಅವರ ಮುಖ ಯಾವುವೊ ತೊಂದರೆಗೀಡಾದ ಮಗುವಿನ ಮುಖದಂತಿತ್ತು. ತುಂಟತನ ಮೂಡಿಬಂದ ಪೋರನ ಕ್ರಾಪಿನಂತೆ ಅವರ ತಲೆಗೂದಲು ಕೆದರಿತ್ತು. ಒಂದೆರಡು ಕೂದಲಿನ ಎಸಳುಗಳು ಹಣೆಯ ಮೇಲೆ ನಲಿದಾಡುತ್ತಿದ್ದವು."

ಮೂರ್ತಿಯ ಆಕರ್ಷಕ ರೂಪಿಗೆ ಪದ್ಮಿನಿ ಮರುಳಾಗುವುದಿರಲಿ, ಪದ್ಮಿನಿ ಮತ್ತು ಮೂರ್ತಿಯ ಮದುವೆಗೆ ಸಮ್ಮತಿಸುತ್ತಾನೆ. ವ್ಯಕ್ತಿಯ ರೂಪವನ್ನು ಓದುಗರ ಕಣ್ಣ ಮುಂದೆ ಕಡೆದು ನಿಲ್ಲಿಸುವಂತಹ ಸಾಮರ್ಥ್ಯ ಇಂತಹ ವ್ಯಕ್ತಿ ಚಿತ್ರಣಕ್ಕಿದೆ. ಸದಾನಂದನಂತೆ ಓದುಗರಿಗೂ ಮೂರ್ತಿಯ ಬಗ್ಗೆ ಗೌರವ ಹಾಗೂ ವಿಶ್ವಾಸ ಮೂಡುತ್ತದೆ.

ಬದುಕಿನಲ್ಲಿ ಅತಿಯಾಸೆ ನಿರೀಕ್ಷೆಗಳನ್ನಿರಿಸಿಕೊಂಡು ಗಂಡಸರನ್ನು ತನ್ನ ತುದಿ ಬೆರಳಿನಿಂದ ಕುಣಿಸುತ್ತಿದ್ದ 'ಕಂಕಣ'ದ ಸುಂದರಿ ಕಸ್ತೂರಿ ತಾನು ಮೆಚ್ಚುವ ಗಂಡಿನ ವರ್ಣನೆ ಹೀಗೆ ಮಾಡುತ್ತಾಳೆ "ನಾವು ಮೆಚ್ಚುವ ಗಂಡಸು ಹುಲಿಯಂತೆ ಕ್ರೂರನಾಗಿರಬೇಕು, ತೋಳನಂತೆ ಹಸಿವುಳ್ಳವನಾಗಿರಬೇಕು, ಮೊಲದಂತೆ ಸಾಧುವಾಗಿರಬೇಕು, ಸಲಗನಂತೆ ಪುಂಡ..." ಕಸ್ತೂರಿಯ ಕಲ್ಪನೆಯಲ್ಲಿ ಮಾತ್ರ ಇರುವಂತಹ ಗಂಡನ್ನು ಬಯಸಿ ಅವಳು ವಿಫಲಳಾದಳು.

" ಬೆಕ್ಕಿನ ಕಣ್ಣು ಕಾದಂಬರಿ ಪ್ರಪಂಚವನ್ನು ಒಂದು ನೂತನ ಪ್ರಯೋಗ ಅವರಲ್ಲಿನ ಸಂಭಾಷಣೆಯ ಒಂದು ಭಾಗವನ್ನು ಇಲ್ಲಿ ಕಲೆಯ ಸೂಕ್ಷ್ಮ ಎಳೆಯೊಂದು ಕೌಶಲ್ಯದಿಂದ ಮೂಡಿಸಿರುವುದಕ್ಕೆ ನಿದರ್ಶನವಾಗಿದೆ.

ಕಾವೇರಿ ಯೌವ್ವನದ ಉತ್ಸಾಹದ ಭರದಲ್ಲಿ ದುಡುಕಿ ಮದುವೆಗೆ ಮುಂಚೆ ಗಂಡಿನ ಕಾಮತೃಷೆಗೆ ಒಳಗಾಗಿ ಶೀಲ ಕಳೆದುಕೊಂಡದ್ದನ್ನು ಹಿನ್ನೋಟ ತಂತ್ರದ ಮೂಲಕ, ಮೇಲಿನ ಸಂಭಾಷಣೆಯಲ್ಲಿ ಪರಿಣಾಮಕಾರಿಯಾಗಿ ವ್ಯಕ್ತಪಡಿಸಿದ್ದಾರೆ.

'ಹಣ್ಣೆಲೆ ಚಿಗುರಿದಾಗ' ಕಾದಂಬರಿಯ ರಾಯರ ಸ್ವಭಾವ, ವರ್ತನೆ ಹಾಗೂ ಗುಣವನ್ನು ಹಾಸ್ಯವಾಗಿ ಎಳೆ ಎಳೆಯಾಗಿ ಬಿಡಿಸಿ ಅವರ ಒಂದು ಚಿತ್ರವನ್ನು ಓದುಗರ ಕಣ್ಣು ಮುಂದೆ ಚಮತ್ಕಾರವಾಗಿ ಕಡೆದು ನಿಲ್ಲಿಸಿದ್ದಾರೆ. ಇಲ್ಲೆಲ್ಲಾ ಬರುವ ಜೀವಂತ ಸಂಭಾಷಣೆಗಳು ಬಹಳ ಆಕರ್ಷವಾಗಿವೆ. ಹೀಗಾಗಿ ಸರಳ ಕೌಟುಂಬಿಕ ಸಂಭಾಷಣೆಗಳು ಅವರ ಕೃತಿಗಳ ಜೀವಾಳವಾದವು, ಪ್ರಮುಖ ಆಕರ್ಷಣೆಯಾದವು.

ತ್ರಿವೇಣಿಯವರ ಕೃತಿಗಳ ಬಗೆಗೆ ಶ್ರೀ ನಿರಂಜನ ಅವರು ಹೀಗೆ ಹೇಳಿದ್ದಾರೆ. "ಮೆದುಳನ್ನು ತೃಪ್ತಿಗೊಳಿಸುವ, ಬಳಲಿಸುವ ಗೋಜಿಗೆ ಹೋಗದೆ, ಹೃದಯವನ್ನು ಮುದಗೊಳಿಸುವ, ಉಲ್ಲಾಸಪಡಿಸುವ ಕಲಾ ನೈಪುಣ್ಯವನ್ನು ಅವರು ತೋರಿದರು. ವಿಸ್ತಾರದ ಬಯಲು. ಅಲ್ಲಿ ವಿಹಾರ, ಗಿರಿಶಿಖರವನ್ನು ಏರಲಿಲ್ಲ. ಪ್ರಪಾತಕ್ಕೆ ಇಳಿಯಲಿಲ್ಲ. ಬಯಲಿನ ವೈಚಿತ್ರ್ಯಗಳನ್ನು ತೋರಿಸುತ್ತಾ ಓದುಗರನ್ನು ತಮ್ಮೊಡನೆ ಅವರು ಕರೆದೊಯ್ದರು.

ಹೀಗೆ ಅವರ ಶೈಲಿ ಆರಕ್ಕೆ ಹೆಚ್ಚಲಿಲ್ಲ, ಮೂರಕ್ಕೆ ಇಳಿಯಲಿಲ್ಲ. ಕಥೆಗಾಗಿ ಸುಮ್ಮನೆ ಪ್ರಸಂಗಗಳನ್ನೇ ಹಾರಿಸಿಕೊಂಡು ಹೋಗಲು ತ್ರಿವೇಣಿ ಒಪ್ಪುವುದಿಲ್ಲ. ಅನುಭವದ ಆಳಕ್ಕಿಳಿದು ಆತ್ಮಶೋಧನೆ ಮಾಡಿಕೊಳ್ಳುವಂತೆ ಓದುಗನನ್ನೇ ಜಗ್ಗಿ ನಿಲ್ಲಿಸುತ್ತಾರೆ. ಮತ್ತು ಇದೆಲ್ಲವನ್ನು ಕಥೆಯಲ್ಲಿ ಸಹಜವಾಗಿ ಮೂಡಿಸುತ್ತಾರೆ. ತ್ರಿವೇಣಿಯವರು ತಮ್ಮ ಕಥೆ, ಕಾದಂಬರಿಗಳಲ್ಲಿ ತೆರೆದಿಡುವ ಬದುಕು ತಿಳಿನೀರಿನ ಕೊಳದಂತೆ ಸ್ವಚ್ಛ, ಪ್ರಶಾಂತವಾದುದು. ಸ್ನೇಹಿತರ ಜೊತೆ ಸುಮ್ಮನೆ ಹರಟುತ್ತ ಕುಳಿತಾಗ ಉಂಟಾಗುವ ಸಂತೋಷ, ನಿರತಂಕಭಾವ ಇಲ್ಲಿ ಲಭಿಸುತ್ತದೆ. ಓದಿದಾಗ ಒಂದು ನವೋಲ್ಲಾಸ, ನವಚೈತ್ಯನ ಮೂಡುತ್ತದೆ, ಮನಸ್ಸು ಹಗುರವಾಗುತ್ತದೆ. ಮಧ್ಯಮವರ್ಗದವರ ಬದುಕಿನಲ್ಲಿ ಬರುವ ಕಷ್ಟಗಳ ಚಿತ್ರಣ ಕೊಡುವುದರ ಜೊತೆಜೊತೆಗೇ ಅಂತಹ ಸಂಕಷ್ಟಗಳಲ್ಲಿ ಬೇಗುದಿಯನ್ನು ಹೇಗೆ ಎದುರಿಸಬೇಕು ಎಂಬುದಕ್ಕೆ ಮನಸ್ಸು ಸಜ್ಜಾಗುವಂತೆ ತ್ರಿವೇಣಿ ಮಾಡುತ್ತಾರೆ. ನಿಜವಾದ ಬದುಕಿನಲ್ಲಿ ಮನುಷ್ಯನಾದವನು ಯಾವುದಕ್ಕೆ ಹಾತೊರೆಯುತ್ತಾನೆ ಎಂಬುವನ್ನೇ ತಿಳಿಯಲು ತ್ರಿವೇಣಿ ಕಾದಂಬರಿಗಳನ್ನು ಓದಬೇಕು ಬದುಕು ಎಷ್ಟೇ ಬದಲಾದಂತೆ ಕಂಡರು. ಆಧುನಿಕತೆಯಲ್ಲಿ

ಎಲ್ಲವು ಬದಲಾಗಿದೆ ಎನ್ನಿಸಿದರೂ ಮನುಷ್ಯನ ಯಶಸ್ಸಿನ ಆಳದಲ್ಲಿ ತ್ರಿವೇಣಿಯವರು ಚಿತ್ರಿಸುವಂತಹ ನಿಷ್ಕಳಂಕ, ನಿರ್ಮಲ, ನಿರ್ವ್ಯಾಜ ಪ್ರೀತಿ ಸ್ನೇಹಗಳ ಬದುಕಿನ ಅಭೀಕ್ಷೆಯೇ ಇರುತ್ತದೆ.

ಯಾವ ಲೇಖಕನೂ ಬದುಕಿನ ಎಲ್ಲ ವರ್ಗಗಳ ಎಲ್ಲ ಮಜುಲುಗಳನ್ನು ಚಿತ್ರಿಸಲು ಸಾಧ್ಯವಿಲ್ಲ. ತಮ್ಮ ಅನುಭವದ ತೆಕ್ಕೆಗೆ ಬಂದ ವಿಷಯಗಳನ್ನೇ ಅವರು ಯಾವ ನಿಲುವಿನಿಂದ ನೋಡುತ್ತಾರೆ ಎಂಬುದಷ್ಟೇ ಮುಖ್ಯ. ಬೇರೆ ಯಾವುದೋ ಪಂಥಕ್ಕೆ ಕಟ್ಟುಬಿದ್ದು ಮನ್ನಣೆಗಾಗಿ ಬರೆಯುವ ಲೇಖಕರು ಜನಸಾಮಾನ್ಯರ ಮನಸ್ಸನ್ನೆ ತಟ್ಟಲಾರರು. ಯಾವ ಬದುಕಿನ ಬಗೆಗೆ ಬರೆಯಲು ಮಾನವೀಯ ಮೌಲ್ಯಗಳು ಅಲ್ಲಿವೆಯೇ ಎಂಬುದನ್ನು ನೋಡಬೇಕು. ಬಡವರಂತೆಯೇ ಮಧ್ಯಮವರ್ಗದವರಿಗೂ ಸಿರಿವಂತರಿಗೂ ಹಾಗೂ ಎಲ್ಲ ಜಾತಿಯವರಿಗೂ ತಮ್ಮದೇ ಆದ ಸಮಸ್ಯೆಗಳಿರುತ್ತವೆ ಎಂಬುದನ್ನು ಮರೆಯಬಾರದು. ಈ ದೃಷ್ಟಿಯಿಂದ ತ್ರಿವೇಣಿಯವರ ಸಾಧನೆ ಗಮನಾರ್ಹವಾಗಿದೆ. ತ್ರಿವೇಣಿ ಕಾದಂಬರಿಗಳಲ್ಲಿ ಚಿತ್ರಿತವಾದ ಸಮಸ್ಯೆ ಬಹುತೇಕವಾಗಿ ಗಂಡು–ಹೆಣ್ಣಿನ ಸಂಬಂಧದ ಸಮಸ್ಯೆ ಇದು ಹೆಚ್ಚಾಗಿ ಕಾಣುವುದು ಮಧ್ಯಮ ವರ್ಗದ ಜನರನ್ನು ಈ ಸಮಸ್ಯೆಯನ್ನು ಎಲ್ಲ ನಿಟ್ಟಿನಿಂದಲೂ ತ್ರಿವೇಣಿ ಪರಿಶೀಲಿಸುತ್ತಾರೆ. ಎಲ್ಲಕ್ಕಿಂತ ಮುಖ್ಯವಾಗಿ ಮನೋರೋಗ ಹಾಗೂ ಮನೋರೋಗಿಗಳ ಬಗ್ಗೆ ಜನಸಾಮಾನ್ಯರಲ್ಲಿ ಸರಿಯಾದ ಅರಿವು ಮೂಡಬೇಕು ಎಂಬ ಕಾಳಜಿ ಬದ್ಧತೆಗಳಿಂದ ತ್ರಿವೇಣಿಯವರು ಬರೆದಿರುವ ಕಾದಂಬರಿಗಳು ಸಮಾಜಕ್ಕೆ ಹಾಗೂ ಕನ್ನಡ ಸಾಹಿತ್ಯಕ್ಕೆ ಒಂದು ಅಪೂರ್ವ ಕೊಡುಗೆ ಎಂಬುದನ್ನು ಗುರುತಿಸಲೇಬೇಕು.

ಅಧ್ಯಾಯ-೩

# ಸಾಮಾಜಿಕ ಮತ್ತು ಮನೋವೈಜ್ಞಾನಿಕ ಕಾದಂಬರಿಗಳಲ್ಲಿ ಸ್ತ್ರೀಪಾತ್ರಗಳು

ತ್ರಿವೇಣಿಯವರ ಸಾಮಾಜಿಕ ಸಮಸ್ಯೆಗಳನ್ನೊಳಗೊಂಡ ಕಾದಂಬರಿಗಳು ಹಾಗೂ ಮನೋವೈಜ್ಞಾನಿಕ ಸಮಸ್ಯೆಗಳ ಕಾದಂಬರಿಗಳೆರಡರಲ್ಲಿಯೂ ಸ್ತ್ರೀಪಾತ್ರ ಚಿತ್ರಣವೇ ಪ್ರಮುಖವಾಗಿರುವುದನ್ನು ಗುರುತಿಸಬಹುದು. ತಾವು ಕಂಡು ಅನುಭವಿಸಿದ ಬದುಕನ್ನು ಹಾಗೂ ವ್ಯಕ್ತಿಗಳನ್ನೂ ಬಹು ಶ್ರದ್ಧೆಯಿಂದ ಆತ್ಮೀಯತೆಯಿಂದ ಸಹಜತೆಗೆ ಧಕ್ಕೆ ಬಾರದಂತೆ ಚಿತ್ರಿಸಿದ್ದಾರೆ. ಹೆಣ್ಣಿನ ದೃಷ್ಟಿಕೋನದಿಂದ ಬದುಕಿನ ಸಮಸ್ಯೆಗಳನ್ನು ತೆರೆದಿಡುವ ಅವರ ಕಾದಂಬರಿಗಳಲ್ಲಿ ಸ್ತ್ರೀಪಾತ್ರ ಚಿತ್ರಣವೇ ಮುಖ್ಯವಾಗಿದೆ. ಈ ಕಾರಣದಿಂದಾಗಿಯೇ ಇವರ ಕಾದಂಬರಿಗಳಲ್ಲಿ ಪುರುಷ ಪಾತ್ರಗಳನ್ನೂ ಉಪೇಕ್ಷಿಸಲಾಗಿದೆ ಎಂಬ ಅಪವಾದವು ಇದೆ. ಇಂತಹ ಏಕಪಕ್ಷೀಯ ಪಾತ್ರಸೃಷ್ಟಿ ಕಾದಂಬರಿಯ ಒಟ್ಟು ಸಾಫಲ್ಯದ ದೃಷ್ಟಿಯಿಂದ ಹಾಗೂ ಪಾತ್ರವೈವಿಧ್ಯದ ದೃಷ್ಟಿಯಿಂದ ಒಳ್ಳೆಯದಲ್ಲವೆನಿಸಿದರೂ, ಸ್ತ್ರೀಯರ ಸಮಸ್ಯೆಗಳನ್ನು ಕುರಿತಾದ ಕಾದಂಬರಿಯ ಪ್ರಮುಖ ಪಾತ್ರಗಳ ಕಡೆಗೆ ಅವರ ಆಸಕ್ತಿ ಹೆಚ್ಚಿರುವುದರಿಂದ ಈ ಬಗೆಯ ಪಾತ್ರ ಸೃಷ್ಟಿಯ ವಿಧಾನ ಕಥಾವಸ್ತುವಿಗೆ ಅನಿವಾರ್ಯವೆನಿಸುತ್ತದೆ. ತ್ರಿವೇಣಿಯವರ ಒಟ್ಟು ಇಪ್ಪತ್ತೊಂದು ಕಾದಂಬರಿಗಳಲ್ಲಿ ಸುಮಾರು ಮೂವತ್ತಕ್ಕೂ ಹೆಚ್ಚು ಮುಖ್ಯ ಸ್ತ್ರೀಪಾತ್ರಗಳನ್ನು ಗುರುತಿಸಬಹುದು. ಸ್ತ್ರೀಪಾತ್ರಗಳ ವೈಶಿಷ್ಟ್ಯತೆಯನ್ನು ಮುಂದಿನ ಅಧ್ಯಾಯದಲ್ಲಿ ವಿಶ್ಲೇಷಿಸಲಾಗಿದೆ. ಇಲ್ಲಿ ಕೆಲವು ಮುಖ್ಯವಾದ ಸ್ತ್ರೀಪಾತ್ರಗಳ ಪರಿಚಯವಷ್ಟೆ ಮಾಡಲಾಗಿದೆ. ಚೈತನ್ಯವಿದೆ. ಕಠೋರ ಸತ್ಯವನ್ನು ಭೇದಿಸುವ ಹರಿತವಿದೆ ಇವರು ತಮ್ಮ ಸತ್ವಪೂರ್ಣ ಬರವಣಿಗೆಯ ಮೂಲಕ ಸ್ತ್ರೀಪರ ಚಿಂತನೆಗೆ ಪ್ರತಿಷ್ಠೆ ಹಾಗೂ ಜನಪ್ರಿಯತೆಯ ನೆಲೆಗಟ್ಟನ್ನು ನಿರ್ಮಿಸಿದರು. ಇಲ್ಲಿ ಕೆಲವು ಮುಖ್ಯವಾದ ಪರಿಚಯವನ್ನಷ್ಟೆ ಮಾಡಲಾಗಿದೆ.

ತ್ರಿವೇಣಿಯವರ ಕಾದಂಬರಿಗಳಲ್ಲಿ ಚಿತ್ರಿತವಾಗಿರುವ ಮೊದಲ ಹೆಣ್ಣುಪಾತ್ರ 'ಮೀರಾ' ಅಪಸ್ವರ ಕಾದಂಬರಿಯ ನಾಯಕಿ, ಇವಳು ಸಣ್ಣ ವಯಸ್ಸಿನಲ್ಲಿ ತಂದೆ-ತಾಯಿಯರನ್ನು ಕಳೆದುಕೊಂಡು ಮೈಸೂರಿನಲ್ಲಿ ತನ್ನ ದೊಡ್ಡಪ್ಪನ ಮನೆಯಲ್ಲಿ ಬೆಳೆಯುತ್ತಾಳೆ. ಬುದ್ಧಿವಂತೆ, ಪ್ರತಿಭಾವಂತೆ, ಓದಿನಲ್ಲೂ ಮುಂದು, ವೈದ್ಯಳಾಗಬೇಕೆಂಬ ಅವಳ ಕನಸಿಗೆ ಅವಳ ದೊಡ್ಡಪ್ಪನ ಮಗ ಉತ್ತೇಜಿಸುತ್ತಾನೆ. ಆದರೆ ಅವಳಿಗೆ ಮದುವೆಯ

ವಯಸ್ಸಾದ್ದರಿಂದ ದೊಡ್ಡಪ್ಪನ ಒತ್ತಾಯದಿಂದ ಮನಸ್ಸಿಲ್ಲದ ಮನಸ್ಸಿನಿಂದ ಹಳ್ಳಿಯ ವಿದ್ಯಾವಂತನಲ್ಲದ ಅನುಕೂಲಸ್ತ ರೈತನ ಕೈಹಿಡಿಯಬೇಕಾಗುತ್ತದೆ. ಆದರೆ ನಗರ ಪರಿಸರದಲ್ಲಿ ಬೆಳೆದ ಮೀರಾಗೆ ಹಳ್ಳಿಪರಿಸರಕ್ಕೆ ಹೊಂದಿಕೊಳ್ಳುವುದು ಕಷ್ಟವಾಗಿ ಉಸಿರು ಗಟ್ಟಿದಂತಾಗುತ್ತದೆ. ತನ್ನ ಬೇಸರ ಕಳೆಯಲಿ ಹಳ್ಳಿ ಹೆಣ್ಣುಮಕ್ಕಳಿಗೆ ಅಕ್ಷರ ಕಲಿಸಲು ಪ್ರಯತ್ನಿಸಿ ಈ ಕಾರ್ಯದಲ್ಲಿ ಸೋಲುತ್ತಾಳೆ. ರಾಮು ಒಳ್ಳೆಯ ವ್ಯಕ್ತಿ ಆದರೂ ಅವನೊಂದಿಗೆ ಸುಖವಾದ ಜೀವನ ನಡೆಸಲಾಗುವುದಿಲ್ಲ. ಅವಳಿಗೆ, ಕಾರಣ ಇವರಿಬ್ಬರ ಆಸಕ್ತಿ, ಅಭಿರುಚಿ, ಅಭಿಪ್ರಾಯ ಸ್ವಭಾವಗಳು ಬೇರೆ ಬೇ್ರೆಯಾಗಿರುತ್ತದೆ. ಈ ಮಧ್ಯೆ ಅವಳು ಹೆಣ್ಣು ಮಗುವಿನ ತಾಯಿಯಾಗುತ್ತಾಳೆ. ತನ್ನ ಬಧುಕಿನಲ್ಲಿ ಆಸಕ್ತಿ ಬೆಳೆಯುತ್ತದೆ. ತನ್ನಿಂದಾಗದ್ದನ್ನು ಮಗಳಿಂದ ಮಾಡಿಸುವುದಾಗಿ ಕನಸು ಕಾಣುತ್ತಾಳೆ. ಮಗಳನ್ನು ವೈದಕಳನ್ನಾಗಿ ಮಾಡಬೇಕೆಂದುಕೊಂಡಿದ್ದ ಮೀರಾಗೆ ಮತ್ತೆ ನಿರಾಶೆಯುಂಟಾಗುತ್ತದೆ. ಅವಳ ಮಗಳಿಗೆ ಖಾಯಿಲೆಯಾಗಿ ಹಳ್ಳಿಯಲ್ಲಿ ಸರಿಯಾದ ಔಷಧೋಪಚಾರ ದೊರೆಯದೆ ಸಾಯುತ್ತಾಳೆ. ಇದರೊಂದಿಗೆ ಮೀರಾಳ ಸಹನೆಯೂ ಸಾಯುತ್ತದೆ. ಮತ್ತೆ ತಾಯಿಯಾಗಲಾರದ ಅವಳು ಮತ್ತೆ ವೈದ್ಯಳಾಗಬೇಕೆಂದು ನಿರ್ಧರಿಸುತ್ತಾಳೆ. ಶಾಮುವು ಅವಳ ಆಸೆಗೆ ಅಡ್ಡಿಮಾಡದೆ ಅವನೆ ಅವಳಿಗೆ ವೈದ್ಯಕೀಯ ಕಾಲೇಜಿಗೆ ಸೇರಿಸುತ್ತಾನೆ. ತ್ರಿವೇಣಿಯವರು ಸ್ತ್ರೀಪಕ್ಷಪಾತಿ ಎಂಬ ಮಾತಿಗೆ ಅಪವಾದವೆಂಬಂತೆ ಇಲ್ಲಿನ ಶಾಮುವಿನ ಪಾತ್ರ ಚಿತ್ರಣವಾಗಿದೆ. ಅವಿದ್ಯಾವಂತನಾದರು ಜೀವನವನ್ನು ಅರ್ಥಮಾಡಿಕೊಂಡ ಸುಶಿಕ್ಷಿತ, ತನ್ನ ಸ್ವಭಾವ, ಆಸಕ್ತಿ, ಅಭಿರುಚಿಗೆ ಹೊಂದಿಕೊಳ್ಳಲಾಗದ ಮೀರಾಳನ್ನು ಅರ್ಥಮಾಡಿಕೊಂಡು ಅವಳ ಆಶೋತ್ತರಗಳಿಗೆ ಸ್ಪಂದಿಸುತ್ತಾನೆ. ಅಪಸ್ವರ ಮುಂದಿನಭಾಗವಾದ 'ಅಪಜಯ'ದಲ್ಲಿ ಮೀರಾ ತನ್ನ ಗಂಡ ತನಗಾಗಿ ಮಾಡಿದ ತ್ಯಾಗವನ್ನು ಅರ್ಥಮಾಡಿಕೊಂಡು ಸಾಂಸಾರಿಕ ಸುಖದಿಂದ ವಂಚಿತನಾದನೆಂದು ಭಾವಿಸಿ ಆ ತಪ್ಪಿನ ಪ್ರಾಯಶ್ಚಿತ್ತಕ್ಕಾಗಿ ಹಳ್ಳಿಯ ಜೀವನಕ್ಕೆ ಹೊಂದಿಕೊಳ್ಳುವಂತಹ ಹೆಣ್ಣೊಬ್ಬಳನ್ನು ಮದುವೆಯಾಗುವಂತೆ ಒತ್ತಾಯಿಸಿ ಮದುವೆ ಮಾಡುತ್ತಾಳೆ. ತನ್ನ ವೈದ್ಯಕೀಯ ಶಿಕ್ಷಣ ಮುಗಿಸಿಕೊಂಡು ಅದೇ ಹಳ್ಳಿಗೆ ಜನರ ಸೇವೆ ಮಾಡಲು ಬರುತ್ತಾಳೆ. ಆದರೆ ಶಾಮುವಿನ ಎರಡನೆಯ ಹೆಂಡತಿ ಮೀರಾಳಿಗೆ ಮತ್ತೆ ಆ ಮನೆಯಲ್ಲಿ ತನ್ನ ಸ್ಥಾನವನ್ನು ಕೊಡುವುದು ಸಹಿಸದೆ ಅವಳ ಬದುಕಿನ ಶಾಂತಿ ಕೆಡಿಸುತ್ತಾಳೆ. ಇದರಿಂದಾಗಿ ಸೋತ ಮೀರಾ ಮತ್ತೆ ಮೈಸೂರಿಗೆ ಹಿಂದಿರುಗುತ್ತಾಳೆ. ಸಾಂಸಾರಿಕ ಜೀವನದಲ್ಲಿ ಅಪಸ್ವರ, ಅಪಜಯವನ್ನು ಕಂಡ ಮೀರಾ ವೃತ್ತಿಜೀವನದಲ್ಲಿ ಜಯಸಾಧಿಸಲು ಪ್ರಯತ್ನಿಸುತ್ತಾಳೆ.

ತ್ರಿವೇಣಿಯವರ ಅನಂತರದ ನಾಯಕಿ ಹೂವು-ಹಣ್ಣು ಕಾದಂಬರಿಯ 'ರಮಾ', ತನ್ನ ಹತ್ತೊಂಬತ್ತು ವಯಸ್ಸಿನಲ್ಲಿ ಮದುವೆಯಾಗಿ ಇಪ್ಪತ್ತೊಂದು ವಯಸ್ಸಿಗೆ ಗಂಡನನ್ನು ಕಳೆದುಕೊಳ್ಳುತ್ತಾಳೆ. ನಾಲ್ಕು ವರ್ಷದ ಮಗಳು ಶೀಲಾ, ಅನಾಥರಾಗುತ್ತಾರೆ. ರಮಾ ಜೀವನ ನಡೆಸಲು ಅರಿತ ಸಣ್ಣ-ಪುಟ್ಟ ಕೆಲಸ ಮಾಡಲು ಪ್ರಯತ್ನಿಸುತ್ತಾಳೆ. ಆದರೆ ಹೋದ ಕಡೆಯಲ್ಲೆಲ್ಲಾ ಅವಳನ್ನು ಕೆಟ್ಟದೃಷ್ಟಿಯಿಂದ ನೋಡುತ್ತಾರೆ. ಗಂಡಸಿನ ಕಾಮುಕತೆಗೆ ಅಸಹಾಯಕಳಾಗಿ ಬಲಿಯಾಗುತ್ತಾಳೆ. ಬೇರೆ ದಾರಿ ಕಾಣದೆ ಅದನ್ನೇ ಬದುಕಿನ ದಾರಿಮಾಡಿಕೊಂಡು ಮಗಳನ್ನು ಸಾಕುತ್ತಾಳೆ. ತನ್ನ ಕೆಟ್ಟನೆರಳು ತನ್ನ ಮಗಳಿಗೆ ಬೀಳಬಾರದೆಂದು ಭಾವಿಸಿ ದೂರದ ಕಾನ್ವೆಂಟ್‌ನಲ್ಲಿ ಉತ್ತಮ ಶಿಕ್ಷಣ ಕೊಡಿಸುತ್ತಾಳೆ. ತನ್ನ ಬಗ್ಗೆ ಮಗಳಿಗೆ ತಿಳಿಸದಿರುವಂತೆ ಕಾನ್ವೆಂಟಿನವರಿಗೆ ಹೇಳಿ ಅವಳ ಓದಿಗೆ ಹಣ ಕಳುಹಿಸುತ್ತಾಳೆ. ಮಗಳು ಶೀಲ ಒಬ್ಬ ಅಧ್ಯಾಪಕನನ್ನು ಪ್ರೀತಿಸಿ ಮದುವೆಯಾಗುತ್ತಾಳೆ. ಈ ವಿಚಾರ ತಿಳಿದು ರಮಾ ಸಂತೋಷಪಡುತ್ತಾಳೆ. ಕೆಲವು ದಿನಗಳ ನಂತರ ರಮಾಳ ಪಕ್ಕದ ಮನೆಗೆ ಅವಳ ಮಗಳು ಶೀಲಾ ವಾಸಿಸಲು ಬರುತ್ತಾಳೆ. ರಮಾಗೆ ತನ್ನ ಮಗಳ ಪರಿಚಯವಿದ್ದರೂ ಶೀಲಾಗೆ ತನ್ನ ತಾಯಿಯ ಪರಿಚಯವಿರುವುದಿಲ್ಲ, ಮಗಳ ಸುಂದರ ಸಂಸಾರ ಮುದ್ದು ಮಗು ಶಶಿಯನ್ನು ಕಂಡು ರಮಾ ಸಂತೋಷಪಡುತ್ತಾಳೆ. ರಮಾ ತನ್ನ ಮೊಮ್ಮಗಳು ಶಶಿಯನ್ನು ವಾತ್ಸಲ್ಯದಿಂದ ಹಚ್ಚಿಕೊಳ್ಳುತ್ತಾಳೆ. ಆದರೆ ಶೀಲಾಳಿಗೆ ಪಕ್ಕದ ಮನೆಯ ಒಬ್ಬ ವೇಶ್ಯೆ ಮನೆಗೆ ತನ್ನ ಮಗಳು ಪದೆ ಪದೆ ಹೋಗುವುದು ಸಹಿಸುವುದಿಲ್ಲ. ಆದ್ದರಿಂದ ಅವಳು ಬೇರೆ ಮನೆ ಮಾಡಲು ನಿರ್ಧರಿಸುತ್ತಾಳೆ. ಈ ವಿಚಾರ ತಿಳಿದ ರಮಾ ತನ್ನಿಂದಾಗಿ ತನ್ನ ಮಗಳಿಗೆ ಯಾವ ತೊಂದರೆಯು ಆಗಬಾರದೆಂದು ನಿಶ್ಚಯಿಸಿ ತಾನೇ ಯಾರಿಗೂ ಕಾಣದೆ ಅಲ್ಲಿಂದ ಎಲ್ಲಿಗೋ ಹೊರಟುಹೋಗುತ್ತಾಳೆ.

'ಭಾರತಿ' ಸೋತುಗೆದ್ದವಳು ಕಾದಂಬರಿಯ ನಾಯಕಿ. ಭಾರತಿ ಮೈಸೂರಿನಲ್ಲಿ ಓದು ಮುಗಿಸಿದ ನಂತರ ಅವರ ತಂದೆ-ತಾಯಿಗಳು ಅವಳಿಗೆ ಆನಂದನೊಡನೆ ಮದುವೆ ಮಾಡುತ್ತಾರೆ. ಭಾರತಿ-ಆನಂದ ತರುಣ ದಂಪತಿಗಳು. ಮದುವೆಯಾದ ಕೆಲವು ದಿವಸಗಳಲ್ಲಿಯೇ ಆನಂದ ಎರಡು ವರ್ಷಗಳ ಕಾಲ ವಿಶೇಷ ವ್ಯಾಸಂಗಕ್ಕಾಗಿ ವಿದೇಶಕ್ಕೆ ತೆರಳುತ್ತಾನೆ. ಮದುವೆಯಾದ ಹೆಣ್ಣು ಗಂಡನಿಂದ ಎಷ್ಟು ತೃಪ್ತಿ ಪಡೆಯಬೇಕೋ ಅಷ್ಟನ್ನು ಪಡೆಯುವ ಮುನ್ನವೇ, ಆನಂದಭಾರತಿಯಿಂದ ಅಗಲುತ್ತಾನೆ. ಭಾರತಿ ವಿರಹತಾಪದಲ್ಲಿ ಬೇಯುತ್ತಿರುವ ಸಮಯದಲ್ಲಿ ಅವಳ ಅತ್ತೆಯ ತಮ್ಮ ಚಂದು ಅವಳ ಚೆಲುವಿಗೆ ಮರುಳಾಗುತ್ತಾನೆ. ಅವನ ಕಾಮತೃಷೆಗೆ ಬಲಿಯಾದ ಭಾರತಿಯು ತನಗೆ ತಿಳಿದೊ ತಿಳಿಯದೆಯೋ ಅವನೊಂದಿಗೆ ಸಹಕರಿಸುತ್ತಾಳೆ.

ಪರಪುರುಷನ ಸಹವಾಸ ಮಾಡಿದಕ್ಕೆ ಭಾರತಿ ತನ್ನ ಅತ್ತೆ ಮಾವನ ತಿರಸ್ಕಾರಕ್ಕೆ ಸಿಂದನೆಗೆ ಗುರಿಯಾಗುತ್ತಾಳೆ. ಪಶ್ಚಾತ್ತಾಪದಿಂದ ಕೊರಗುತ್ತಾಳೆ. ಅಷ್ಟು ಹೊತ್ತಿಗೆ ವಿದೇಶದಿಂದ ಹಿಂದಿರುಗಿದ ಆನಂದ ತಾನು ಸಹ ವಿದೇಶದಲ್ಲಿ ದೇಹದ ಬಯಕೆಗೆ ಬಲಿಯಾಗಿ ಪತಿತನಾದುದುದಾಗಿ ಹೇಳಿಕೊಳ್ಳುತ್ತಾನೆ. ಸಮಾಜದಲ್ಲಿ ಗಂಡಿಗೊಂದು ನೀತಿ, ಹೆಣ್ಣಿಗೊಂದು ನೀತಿಯಿರುವುದು ನ್ಯಾಯವಲ್ಲವೆಂದು ತಿಳಿಸಿ ಹೆಂಡತಿಯ ಅಪರಾಧವನ್ನು ಮನ್ನಿಸುತ್ತಾನೆ.

'ಮೊದಲ ಹೆಜ್ಜೆ' ಕಾದಂಬರಿಯ ಕೇಂದ್ರ ಪಾತ್ರ ಹೆಣ್ಣೇ ಇಲ್ಲಿ ನಾಯಕಿ. ಬೇಡದ ಮಗುವಾಗಿ ಜನಿಸುತ್ತಾಳೆ. ತಂದೆ ತಾಯಿಗಳ ಬಡತನದಿಂದಾಗಿ ಮಗುವನ್ನು ಭಯಸದ ಸಮಯದಲ್ಲಿ ಹುಟ್ಟಿಬಿಡುತ್ತಾಳೆ. ಅದೂ ಸುಂದರಿಯಲ್ಲದ ಕಪ್ಪು ಬಣ್ಣದ ಹೆಣ್ಣಾಗಿ. ತಂಗಿ ಮತ್ತು ತಮ್ಮ ಹುಟ್ಟಿದ ಮೇಲೆ ಇವಳು ಅನಾದರಕ್ಕೆ ಗುರಿಯಾಗುತ್ತಾಳೆ. ಮನೆ ಕೆಲಸದ ಒತ್ತಡ ಬಡತನದಿಂದ ಇವಳ ಶಿಕ್ಷಣವು ಅಲ್ಲಿಗೆ ನಿಲ್ಲುತ್ತದೆ. ಇವಳ ಬಾಲ್ಯವೆಲ್ಲ ತಾಯಿಯ ಬಾಣಂತನ, ತಂಗಿ, ತಮ್ಮರ ಆರೈಕೆಯಲ್ಲಿ ಕಾಲಕಳೆಯುತ್ತಾಳೆ. ಇವಳಿಗೆ ಮದುವೆ ಮಾಡಬೇಕೆಂದು ಗಂಡುಗಳನ್ನು ಅರಸುತ್ತಾರೆ. ಆದರೆ ಇವಳನ್ನು ನೋಡಲು ಬಂದವರೆಲ್ಲ ತಂಗಿಯನ್ನು ಕೇಳುತ್ತಾರೆಯೇ ಹೊರತು ಇವಳನ್ನಲ್ಲ. ಬೇರೆದಾರಿಯಿಲ್ಲದ ಇವಳ ತಂದೆ ಇವಳಿಗೂ ಮೊದಲು ತಂಗಿಗೆ ಮದುವೆಯನ್ನು ಮಾಡುತ್ತಾರೆ. ತಂಗಿ ಬಸುರಿಯಾದಾಗ ಅವಳ ಸಹಾಯಕ್ಕೆ ಹಾಗೂ ಬಾಣಂತನದ ಕೆಲಸಕ್ಕೆ ತಂಗಿಯ ಮನೆಗೆ ಬರುತ್ತಾಳೆ. ತಂಗಿಯ ಸುಖ ಸಂಸಾರ ಅವರಿಬ್ಬರ ಸರಸಸಲ್ಲಾಪ, ಪ್ರೇಮ ಇವುಗಳನ್ನು ನೋಡುತ ಅವಳಲ್ಲಿದ್ದ ಸಹಜವಾದ ಆಸೆ ಭಾವನೆಗಳು ಗರಿಗೆದರುತ್ತವೆ. ಅವಳ ಮನಸ್ಸು ಪ್ರೇಮಕ್ಕಾಗಿ ಹಾತೊರೆಯುತ್ತಿರುತ್ತದೆ. ಈ ಸಂದರ್ಭದ ದುರುಪಯೋಗಕ್ಕೆ ಪಕ್ಕದ ಮನೆಯ ಶ್ರೀಮಂತ ಹುಡುಗ ಹೊಂಚು ಹಾಕುತ್ತಾನೆ. ಅವನು ಮೊದಲೇ ಕಾಲೇಜಿನಲ್ಲಿ ಹೆಣ್ಣೊಬ್ಬಳನ್ನು ಬಯಸಿ ಅವಳಿಂದ ತಿರಸ್ಕೃತನಾಗಿ ಪ್ರಣಯಭಂಗವಾಗಿರುತ್ತದೆ. ಆ ಸೇಡನ್ನು ತೀರಿಸಿಕೊಳ್ಳುವಂತೆ ಮೋಸದ ಗಾಳ ಬೀಸುತ್ತಾನೆ. ಹಸಿದಿದ್ದ ಇವಳು ಸುಲಭವಾಗಿ ಅವನ ಪ್ರೀತಿ ಪ್ರೇಮದ ನಾಟಕದ ಮಾತುಗಳನ್ನು ನಂಬಿ ಅವನಿಗೆ ಸರ್ವಸ್ವವನ್ನು ಒಪ್ಪಿಸುತ್ತಾಳೆ. ಮಾರನೆಯ ದಿನವೆ ಅವನು ಮನೆ ಖಾಲಿ ಮಾಡಿಕೊಂಡು ಹೋಗಿರುತ್ತಾನೆ. ಅವನ ಮೋಸದ ಫಲ ಅವಳ ಗರ್ಭದಲ್ಲಿರುತ್ತದೆ. ತಂದೆ-ತಾಯಿ ಸಮಾಜಕ್ಕೆ ಮುಖ ತೋರಿಸಲಾಗದೆ ಇವಳು ಮನೆಬಿಟ್ಟು ಹೋಗುತ್ತಾಳೆ. ಒಂದು ಕಡೆ ಮೋಸದಿಂದಾದ ಮನಸ್ಸಿನ ಮೇಲಿನ ಗಾಯ, ಮತ್ತೊಂದು ಆಶ್ರಯವಿಲ್ಲದೆ ಆರ್ಥಿಕವಾಗಿ ನಿರ್ಗತಿಕಳಾದ ಅವಳಿಗೆ ಸಮಾಜ ಮನ್ನಣೆ ನೀಡದ ಗರ್ಭ. ಕೊನೆಗೆ ಆರೋಗ್ಯವಂತ ಮುದ್ದಾದ

ಗಂಡುಮಗುವಿಗೆ ಜನ್ಮ ನೀಡಿದರೂ ಸಾಕುವ ದಾರಿ ಕಾಣದ ಮಗವನ್ನು ಕೊಂದು ಜೈಲು ಸೇರುತ್ತಾಳೆ. ಇಲ್ಲೂ ಪುರುಷ ಸಮಾಜದ ಕ್ರೌರ್ಯಕ್ಕೆ ಬಲಿಯಾದ ಹೆಣ್ಣು ಮಕ್ಕಳಿರುತ್ತಾರೆ. ಒಬ್ಬೊಬ್ಬರ ಕತೆಯೂ ಒಂದೊಂದು ಬಗೆಯದು. ವಿವಿಧ ಸ್ವಭಾವ ಸಮಸ್ಯೆಯ ಹೆಣ್ಣುಗಳನ್ನು ನಾಯಕಿ ಇಲ್ಲಿ ನೋಡುತ್ತಾಳೆ. ಸಮಾಜದ ಹೊರಗೆ ಕಲಿಯದ್ದನ್ನು ಜೈಲಿನ ಒಳಗೆ ಕಲಿಯುತ್ತಾಳೆ, ಮದುವೆಯಾದ ಭಿಕ್ಷುಕಿ, ಭಿಕ್ಷುಕನೊಬ್ಬನಿಂದ ಗರ್ಭಧರಿಸಿ ಮಗುವನ್ನು ಹಡೆಯಲು ಜೈಲು ಸೂಕ್ತವಾದ ಸ್ಥಳವೆಂದು ಭಾವಿಸಿ ಸಣ್ಣ ಕಳ್ಳತನ ಮಾಡಿ ಜೈಲಿಗೆ ಉದ್ದೇಶಪೂರ್ವಕವಾಗಿ ಬಂದಿರುವುದನ್ನು ಕಂಡು ನಾಯಕಿಗೆ ಆಶ್ಚರ್ಯವಾಗುತ್ತದೆ. ಈ "ಧೈರ್ಯ ನಾನೇಕೆ ಮಾಡಲಿಲ್ಲ ಮಗುವನ್ನು ಕೊಲ್ಲಬಾರದಿತ್ತು" ಎಂದು ಪಶ್ಚಾತ್ತಾಪ ಪಡುತ್ತಾಳೆ. ಶಿಕ್ಷೆ ಮುಗಿದ ಮೇಲೆ ಹೊಸ ಜೀವನ ಮಾಡಬೇಕೆಂದು ಭಾವಿಸುತ್ತಾಳೆ. ಶಿಕ್ಷೆ ಮುಗಿಸಿ ಹೊರಬರುವ ದಿನ ಹೊಸ ಕೈದಿಯೊಬ್ಬ ಹತ್ತು ವರ್ಷದ ಹುಡುಗಿಯ ಮೇಲೆ ಅತ್ಯಚಾರವೆಸಗಿ ಶಿಕ್ಷೆಗೆ ಗುರಿಯಾಗಿ ಬಂದವನು ತನಗೆ ದ್ರೋಹ ಮಾಡಿದ ಶಿವಸ್ವಾಮಿ ಎಂದು ತಿಳಿಯುತ್ತದೆ. ಜೈಲಿನಿಂದ ಬಿಡುಗಡೆಯಾಗಿ ಹೊರಬರುತ್ತಾಳೆ, ಮಳೆಬರುತ್ತಿದ್ದರಿಂದ ಮರದ ಕೆಳಗೆ ನಿಲ್ಲುತ್ತಾಳೆ. ಗೇಟಿನ ಬಳಿ ವೃದ್ಧರೊಬ್ಬರು ಮಳೆಯಲ್ಲಿ ನೆನೆಯುತ್ತಾ ನಿಂತಿರುತ್ತಾರೆ. ಅವರು ಬೇರೆ ಯಾರೂ ಅಲ್ಲ ಅವಳ ತಂದೆ. ಅವರು ಮಗಳನ್ನು ಮನೆಗೆ ಹೋಗೋಣವೆನಮ್ಮ ಎಂದು ಕರೆಯುತ್ತಾರೆ. ತಂದೆಯ ವಾತ್ಸಲ್ಯಕ್ಕೆ ಮರುಗಿ ಅವರೊಂದಿಗೆ ಹೋಗುತ್ತಾಳೆ.

'ಕೀಲುಗೊಂಬೆ' ಕಾದಂಬರಿಯ ನಾಯಕಿ 'ಸೀತ' ಕೆಳಮಧ್ಯಮವರ್ಗದ ಬಡ ತಂದೆ-ತಾಯಿಗಳ ಮಗಳು. ಹಿಂದೂ ಸಂಪ್ರದಾಯಕ್ಕೆ ಬದ್ಧವಾದ ಕುಟುಂಬದಲ್ಲಿ ಬೆಳೆದ ಸೀತಾಳಿಗೆ ಇನ್ನೂ ಹತ್ತು ವರ್ಷದವಳಿದ್ದಾಗಲೇ ಅವಳ ಅಜ್ಜಿ ಮದುವೆ ಮಾಡಲು ಒತ್ತಾಯಿಸಿ ಅವಳ ತಂದೆ ಗಂಡನ್ನು ಅರಸುತ್ತಾರೆ. 'ಯೋಗ್ಯ' ವರನಿಗೆ ಬೇಕಾದ ವರದಕ್ಷಿಣೆ ಕೊಡಲು ಸಾಧ್ಯವಾಗದೆ ಹೋದ ಕಡೆಯಲ್ಲ ಅವಮಾನಿತರಾಗಿ ಕೊನೆಗೆ ಇಪ್ಪತ್ತೈದು ವರ್ಷದ ಹೈಸ್ಕೂಲ್ ಶಿಕ್ಷಕ 'ನರಸಿಂಹಯ್ಯ'ನೊಡನೆ ಸೀತಾಳ ಮದುವೆಯಾಗುತ್ತದೆ. ವಿದ್ಯಾವಂತನಾದರೂ ನರಸಿಂಹಯ್ಯ ಸಾಂಪ್ರದಾಯಿಕ ವ್ಯವಸ್ಥೆಯ ಪರಿಸರದಲ್ಲಿ ಬೆಳೆದವನು. ಅವನ ದೃಷ್ಟಿಯಲ್ಲಿ ಹೆಂಡತಿ ಎಂದರೆ ಮನೆಕೆಲಸದ ಆಳು. ರಾತ್ರಿಯಲ್ಲಿ ಗಂಡನಿಗೆ ಸುಖ ಕೊಡುವುದಷ್ಟೇ ಅವಳ ಕೆಲಸ, ಎಂದು ಭಾವಿಸಿ ಸೀತಾಳನ್ನು ಕ್ರೂರವಾಗಿ ನಡೆಸಿಕೊಳ್ಳುತ್ತಾನೆ. ಮದುವೆಯಾದ ರಾತ್ರಿಯೆ ನರಸಿಂಹಯ್ಯ ಮೃಗೀಯವಾಗಿ ವರ್ತಿಸಿ ಅವಳನ್ನು ಹಿಂಸಿಸುತ್ತಾನೆ ಸಂಭೋಗವೆಂದರೆ ಒಂದು ಕಠಿಣವದ ಶಿಕ್ಷೆಯೆಂದು ಸೀತಾ ಭಾವಿಸುತ್ತಾಳೆ. ಗಂಡನ ಎಲ್ಲೆಯಿಲ್ಲದ ಲೈಂಗಿಕ ತೃಷೆಯಿಂದಾಗಿ ಮೇಲಿಂದ ಮೇಲೆ ಗರ್ಭಪಾತವಾಗಿ

ಕೊನೆಗೊಂದು ಗಂಡುಮಗುವಿಗೆ ಜನ್ಮ ನೀಡುತ್ತಾಳೆ. ಗಂಡನ ದೌರ್ಜನ್ಯದಿಂದ ಮಾನಸಿಕವಾಗಿ, ದೈಹಿಕವಾಗಿ ದುರ್ಬಲಳಾಗಿದ್ದ ಸೀತ ಆಸ್ಪತ್ರೆಗೆ ಆಗಿಂದಾಗ್ಗೆ ಹೋಗಿ ಚಿಕಿತ್ಸೆ ಪಡೆದು ಅಲ್ಲಿ ಸ್ವಲ್ಪ ಕಾಲವಿದ್ದು ಚೇತರಿಸಿಕೊಂಡು ಮನೆಗೆ ಮರಳುವುದು ಅವಳ ಬದುಕಿನಲ್ಲಿ ಸಾಮಾನ್ಯವಾಗಿ ಹೋಗುತ್ತದೆ. ಈ ಮಧ್ಯೆ ಮಗ ದೊಡ್ಡವನಾದಂತೆ ತಂದೆಯ ಕೆಟ್ಟ ನಡವಳಿಕೆಯನ್ನು ದ್ವೇಷಿಸುತ್ತಾನೆ. ತಾಯಿಯನ್ನು ಪ್ರೀತಿಸುವ ಮಧು ತಂದೆಯ ಕ್ರೌರ್ಯವನ್ನು ಖಂಡಿಸುತ್ತಾನೆ. ಒಮ್ಮೆ ದೀರ್ಘಕಾಲ ಆಸ್ಪತ್ರೆಯಲ್ಲಿದ್ದ ಸೀತಾಳಿಗೆ ಮನೆಗೆ ಮರುಳುವಾಗ ವೈದ್ಯರು ಇನ್ನೊಮ್ಮೆ ಗರ್ಭಧರಿಸಿದರೆ ಪ್ರಾಣಕ್ಕೆ ಅಪಾಯವಾಗಬಹುದೆಂದು ಎಚ್ಚರಿಕೆ ಕೊಟ್ಟರೂ ಸೀತ ಮನೆಗೆ ಬಂದ ಕೂಡಲೇ ಮತ್ತೆ ನರಸಿಂಹಯ್ಯ ಲೈಂಗಿಕ ಸುಖಕ್ಕಾಗಿ ಅವಳನ್ನು ಬಲಾತ್ಕರಿಸುತ್ತಾನೆ. ಅವರಿಬ್ಬರ ಕೂಗಾಟ ಕೇಳಿ ಮದು ತನ್ನ ತಾಯಿಯ ಈ ದುರ್ಗತಿಗೆ ತಂದೆಯೇ ಕಾರಣವೆಂದು ಪ್ರತಿಭಟಿಸುತ್ತನೆ. ಮೊದಲೇ ದೈಹಿಕವಾಗಿ ಶಕ್ತಿಹೀನಳಾಗಿದ್ದ ಸೀತಾ ತಂದೆಮಗನ ತೀವ್ರ ಘರ್ಷಣೆಯನ್ನು ಸಹಿಸಲಾರದೆ ಕುಸಿದು ಬಿದ್ದು ಪ್ರಾಣಬಿಡುತ್ತಾಳೆ.

ಆರು ಜನ ಅವಿವಾಹಿತ ತರುಣಿಯರು ಹಮ್ಮ ತಮ್ಮ ಪರಿಸರಕ್ಕೆ ತಕ್ಕಂತೆ ಯಾವ ರೀತಿ ಹೊಂದಿಕೊಳ್ಳುತ್ತಾರೆಂಬುದು ಕಂಕಣ ಕಾದಂಬರಿಯಲ್ಲಿ ಚಿತ್ರಿತವಾಗಿದೆ.

ವಿದ್ಯಾಭ್ಯಾಸ ಮುಗಿಸಿದ ಆರು ಜನ ಹೆಣ್ಣುಮಕ್ಕಳು ಮುಂದೇನು ಎಂಬ ಪ್ರಶ್ನೆ ಅವರೆದುರಿಗಿದೆ ಮದುವೆಯೋ? ಉದ್ಯೋಗವೋ? ಯವುದನ್ನು ಆರಿಸಿಕೊಳ್ಳಬೇಕು ಎಂಬ ಗೊಂದಲದಲ್ಲಿ ಒಬ್ಬೊಬ್ಬರು ಒಂದೊಂದು ದಿಕ್ಕಿನಲ್ಲಿ ಚಲಿಸುತ್ತಾರೆ. ಅವರಲ್ಲಿ ಮುಖ್ಯಳಾದವಳು 'ರಮಾ' ಬಡ ಕುಟುಂಬದಲ್ಲಿ ಹಿರಿಯ ಮಗಳು ಅವಳ ತಂದೆಯ ಮರಣದ ನಂತರ ಅವಳ ತಾಯಿ, ಇಬ್ಬರು ತಂಗಿಯರು ಒಬ್ಬ ತಮ್ಮ ಇವರೆಲ್ಲರನ್ನು ಸಾಕುವ ಜವಾಬ್ದಾರಿ ಅವಳದು. ರಮಾಳಿಗೆ ತನಗೆ ಓದಲು ಅಗತ್ಯವಾದ ಪಠ್ಯಪುಸ್ತಕಗಳನ್ನು ಕೊಳ್ಳಲಾಗದಷ್ಟು ಬಡತನ ದಸರಾ, ಬೇಸಿಗೆ ಮುಂತಾದ ರಜೆಗಳಲ್ಲಿ ಮನೆಪಾಠ ಮುಂತಾದ ಚಿಕ್ಕಪುಟ್ಟ ಕೆಲಸಗಳನ್ನು ಮಾಡಿ ಸಂಸಾರವನ್ನು ಸಾಕುತ್ತಾಳೆ. ಬಡತನ, ಕಷ್ಟಗಳಿಂದಾಗಿ ಅವಳ ಮುಖ ನಗುವನ್ನು ಕಾಣದೆ ಯಾವಾಗಲೂ ಗಂಭೀರವಾಗಿರುತ್ತದೆ. ಇತರರೊಡನೆ ಹೆಚ್ಚು ಬೆರೆಯದೆ ಇದ್ದು ತನ್ನ ಕಷ್ಟವನ್ನು ಯಾರೊಂದಿಗೂ ಹಂಚಿಕೊಳ್ಳಲು ಹಿಂಜರಿಯುವ ಸ್ವಭಾವ ರಮಾಳದು. ತನ್ನ ತಮ್ಮ ಹಾಗೂ ತಂಗಿಯರು ಓದು ಮುಗಿಸಿ ಅವರ ಮದುವೆಮಾಡಿ ಜವಾಬ್ದಾರಿಗಳೆಲ್ಲಾ ಮುಗಿದ ಮೇಲೆ ರಮಾ ಅವಳ ಮದುವೆಯ ಬಗ್ಗೆ ಯೋಚಿಸಬೇಕು. ಓದು ಮುಗಿಸಿದ ಕೂಡಲೇ ರಮಾ ಒಂದು ಟ್ಯುಟೋರಿಯಲ್ ಕಾಲೇಜಿನಲ್ಲಿ ಅಧ್ಯಾಪಕಿಯಾಗಿ ಸೇರುತ್ತಾಳೆ.

ಅವಳೊಬ್ಬಳ ಸಂಬಳ ಸಂಸಾರ ಹಾಗೂ ತಮ್ಮ ತಂಗಿಯರ ಅಗತ್ಯಗಳನ್ನು ಪೂರೈಸಲು ಸಾಕಾಗುವುದಿಲ್ಲ. ತನ್ನ ಕಾಲೇಜಿನಲ್ಲಿ ಹಗಲು ದುಡಿದು ರಾತ್ರಿಶಾಲೆಯಲ್ಲಿ ಓದು ಮುಂದುವರಿಸುತ್ತಿರುವ ವ್ಯಕ್ತಿಯೊಬ್ಬನ ಪರಿಚಯ ಅವಳಿಗಾಗಿ ಪ್ರೇಮ ಬೆಳೆಯುತ್ತದೆ. ಅವರಿಬ್ಬರೂ ಮದುವೆಯಾಗಲು ನಿರ್ಧರಿಸುತ್ತಾರೆ. ಆದರೆ ತಮ್ಮ ತಂಗಿಗೆ ಒಂದು ದಾರಿಯಾಗುವವರೆಗೆ ಕಾಯಬೇಕು. ಆದರೆ ತಮ್ಮ ಬಡತನಕ್ಕೆ ಬೇಸತ್ತು ಚಿಕ್ಕಪುಟ್ಟ ಕಳ್ಳತನ ಮಾಡಲು ಪ್ರಾರಂಭಿಸುತ್ತಾನೆ ಮತ್ತು ತಂಗಿ ಸಿನಿಮಾ ಸೇರುವ ಹುಚ್ಚು ಹಿಡಿಸಿಕೊಂಡು ಅಡ್ಡದಾರಿ ಹಿಡಿಯಲು ಸಿದ್ಧವಿರುವ ಸಂದರ್ಭದಲ್ಲಿ ರಮಾ ತನ್ನ ಕುಟುಂಬದ ರಕ್ಷಣೆಗಾಗಿ ತನ್ನ ಪ್ರೇಮವನ್ನು ಬಿಟ್ಟು ಶ್ರೀಮಂತ ಕುರುಡ ವ್ಯಕ್ತಿಯನ್ನು ಮದುವೆಯಾಗಲು ನಿರ್ಧರಿಸುತ್ತಾಳೆ. ಅವನು ಇವಳ ತಂಗಿಯ ಮದುವೆ ಮಾಡಲು ಹಾಗೂ ತಮ್ಮನ ಬದುಕಿಗೆ ಒಂದು ದಾರಿ ಮಾಡಲು ಸಹಾಯ ಮಾಡಲು ಒಪ್ಪಿದ್ದರಿಂದ ಇವಳು ಅವನನ್ನು ಮದುವೆಯಾಗುತ್ತಾಳೆ. ಇದು ಅವಳ ಕರ್ತವ್ಯದ ಕಂಕಣ. ಇವಳ ಕಷ್ಟಗಳಿಗೆ ಅಂತ್ಯ ಮುಕ್ತಿ ಕಾದಂಬರಿಯಲ್ಲಿ ಮುಂದುವರೆದಿದೆ. ಕಾಲಕಳೆದಂತೆ ರಮಾ ನಿಧಾನವಾಗಿ ತನ್ನ ಗಂಡನಿಗೆ ತನ್ನ ಬಗ್ಗೆ ಇರುವ ಅಭಿಮಾನ ಹಾಗೂ ಒಳ್ಳೆಗುಣವನ್ನು ಮೆಚ್ಚಿ ಪ್ರೀತಿಸುತ್ತಾಳೆ. ಸುಂದರ ಮಗುವಾದ ಮೇಲೆ ತನ್ನ ದಾಂಪತ್ಯ ಜೀವನದಲ್ಲಿ ತೃಪ್ತಳಾಗುತ್ತಾಳೆ.

ಈ ಕಾದಂಬರಿಯಲ್ಲಿ ಬರುವ ಮತ್ತೊಂದು ಹೆಣ್ಣು ಕಸ್ತೂರಿ ಧೈರ್ಯವಂತೆ, ಚತುರೆ 'ಕಸ್ತೂರಿ' ಯಾವುದೇ ಜವಾಬ್ದಾರಿಯಿಲ್ಲದೆ ಯುವಕರೊಡನೆ ಕಾಲಕಳೆಯುತ್ತಾಳೆ. ಸಾಕಷ್ಟು ಶ್ರೀಮಂತಳಾದ ಕಸ್ತೂರಿ ಪುಸ್ತಕಗಳನ್ನು ಓದುತ್ತಾ ಸ್ನೇಹಿತರೊಂದಿಗೆ ಹೋಡಾಡುತ್ತಾ ಇರುವವಳು ಒಮ್ಮೆ ಊಟಿಗೆ ಸ್ನೇಹಿತೆರೊಂದಿಗೆ ಪ್ರವಾಸಕ್ಕೆ ಹೋದಾಗ ಅಂಬಿಕೆಯ ಅಣ್ಣನ ನಾಟಕದ ಪ್ರೇಮದ ಮಾತುಗಳಿಗೆ ಬಲಿಯಾಗುತ್ತಾಳೆ. ಕಸ್ತೂರಿಗೆ ಮನೆಯಲ್ಲಿ ಮದುವೆ ನಿಶ್ಚಯಿಸಿದಾಗ ಅಂಬಿಕೆಯ ಅಣ್ಣನಿಗೆ ಪತ್ರ ಬರೆದು ತನ್ನ ಭಾವನೆಗಳನ್ನು ಸ್ಪಷ್ಟವಾಗಿ ಬರೆಯುತ್ತಾಳೆ. ಆದರೆ ಅಂಬಿಕೆಯ ಅಣ್ಣ ಆ ಪ್ರೇಮಪತ್ರವನ್ನು ತನ್ನ ತಂಗಿಗೆ ತೋರಿಸಿದ್ದಲ್ಲದೆ ಕಸ್ತೂರಿ ನಡತೆಯ ಬಗ್ಗೆ ಎಲ್ಲರಿಗೆ ಪ್ರಚಾರ ಮಾಡುತ್ತಾನೆ. ಕಸ್ತೂರಿ ಅವಮಾನ ಸಹಿಸಲಾಗದೆ ರೈಲಿಗೆ ಸಿಕ್ಕಿ ಆತ್ಮಹತ್ಯೆ ಮಾಡಿಕೊಳ್ಳುತ್ತಾಳೆ.

'ವೇದವಲ್ಲಿ' ಈ ಕಾದಂಬರಿಯಲ್ಲಿ ಬರುವ ಮತ್ತೊಂದು ಸ್ತ್ರೀಪಾತ್ರ ಶ್ರೀಮಂತಳಾದರೂ, ರೂಪವತಿಯಲ್ಲ ಜೊತೆಗೆ ಕಪ್ಪುಬಣ್ಣದಿಂದಾಗಿ ವಯಸ್ಸಾದರೂ ಮದುವೆಯಾಗದಿದ್ದಾಗ ತನ್ನ ಕ್ರಿಶ್ಚಿಯನ್ ಸಂಗೀತ ಶಿಕ್ಷಕನೊಡನೆ ಓಡಿ ಹೋಗುತ್ತಾಳೆ. ನಿಧಾನವಾಗಿ ತನ್ನ ಗಂಡನ ಕೆಟ್ಟ ಚಟ, ಬೇಜವಾಬ್ದಾರಿತನ

ಅರಿವಾಗುತ್ತದೆ. ತನ್ನ ತಂದೆ ತಾಯಿಗಳಿಗೆ ಮುಖ ತೋರಿಸಲಾಗದೆ ತಾನೆ ಕೆಲಸಕ್ಕೆ ಹೋಗಿ ದುಡಿದು ತನ್ನ ಕುಡುಕ ಗಂಡನನ್ನು ಸಾಕುವ ಹೊಣೆ ಹೊರುತ್ತಾಳೆ.

'ಸುಶೀಲ', ಜೀವನದಲ್ಲಿ ನಿರಾಶೆಯ ಆಘಾತಕೊಳಗಾಗಿ ಬದುಕನ್ನು ತನ್ನದೇ ಆದ ರೀತಿಯಲ್ಲಿ ರೂಪಿಸಿಕೊಳ್ಳುತ್ತಾಳೆ. ಶೇಷಾದ್ರಿ ಎಂಬುವನನ್ನು ಪ್ರೀತಿಸಿ ಅವನು ಕೆಲಸವಿಲ್ಲದೆ ಮದುವೆಯಾಗುವುದಿಲ್ಲವೆಂದು ನಿರ್ಧರಿಸಿ ಕೊನೆಗೆ ಕೆಲಸವೇ ಸಿಗದೆ ಊರು ಬಿಟ್ಟು ಹೋದಾಗ ಸುಶೀಲ ಕಂಡ–ಕಂಡ ಗಂಡಸರೊಂದಿಗೆ ಸ್ವೇಚ್ಛವಾದ ಜೀವನ ಸಾಗಿಸುತ್ತಾಳೆ.

'ಅಂಬಿಕಾ' ಶ್ರೀಮಂತಳಾದರೂ ಬದುಕಿನಲ್ಲಿ ಅತಿಯಾಸೆ ಹೊಂದಿರದೆ ಇದ್ದುದರಲ್ಲೇ ಸಂತೋಷವಾಗಿರುವ ಸ್ವಭಾವದಿಂದ ಬದುಕಿನಲ್ಲಿ ಯಶಸ್ಸು ಸಾಧಿಸುತ್ತಾಳೆ.

ಕೊನೆಯವಳು 'ಅಮೃತ', ಇತ್ತ ಮದುವೆಯೂ ಆಗದೆ ಕೆಲಸಕ್ಕೂ ಹೋಗಲಾರದೆ ಅತಂತ್ರ ಜೀವನ ಸಾಗಿಸುತ್ತಿರುತ್ತಾಳೆ. ಮುಕ್ತಿ ಕಾದಂಬರಿಯಲ್ಲಿ ಪ್ರಮುಖವಾದ ಪಾತ್ರ ಅಮೃತಾಳದು. ಕಂಕಣದಲ್ಲಿ ಆರಂಭವಾದ ಆರು ಜನ ಸ್ನೇಹಿತೆಯರ ಜೀವನ ಮುಕ್ತಿಯಲ್ಲಿ ಒಂದು ಮಟ್ಟಕ್ಕೆ ಬಂದು ನಿಲ್ಲುತ್ತದೆ. ಅಮೃತ ಕಪ್ಪು ಬಣ್ಣವೆಂಬ ಕಾರಣಕ್ಕೆ ವಯಸ್ಸಾದರೂ ಮದುವೆಯಾಗದೆ ಉಳಿದು ಕೊನೆಗೆ ಮುಂಬಯಿಗೆ ಬಂದು ಪತ್ರಿಕಾಲಯದಲ್ಲಿ ಟೈಪಿಸ್ಟ್ ಆಗಿ ಸೇರಿಕೊಳ್ಳುತ್ತಾಳೆ. ಅಲ್ಲಿ ಮದುವೆಯಾಗಿ ಕಾಯಿಲೆ ಹೆಂಡತಿಯಿದ್ದ ವ್ಯಕ್ತಿಯನ್ನು ಪ್ರೀತಿಸಿ ಅಸ್ತಮಕಾಯಿಲೆಯಿಂದ ನರಳುತ್ತಿದ್ದ ಹೆಂಡತಿ ಸಾಯುವವರೆಗೆ ಆ ವ್ಯಕ್ತಿಯನ್ನು ಮದುವೆಯಾಗಲು ಸಾಧ್ಯವಾಗದೆ ಕಾದಂಬರಿ ಮುಕ್ತಾಯವಾಗುತ್ತದೆ.

'ಬೆಳ್ಳಿಮೋಡ' ಕಾದಂಬರಿಯ ನಾಯಕಿ 'ಇಂದಿರಾ' ಚಿಕ್ಕಮಂಗಳೂರಿನ ಕಾಫಿ ಎಸ್ಟೇಟಿನ ಮಾಲೀಕರೂ, ದೊಡ್ಡಬಂಗಲೆಯ ಒಡೆಯರೂ ಆದ ಸದಾಶಿವರಾಯರ ಒಬ್ಬಳೇ ಮಗಳು. ವಿದ್ಯಾವಂತೆ, ಬುದ್ಧಿವಂತೆ, ಶ್ರಮಜೀವಿ ಇಂದಿರಾ, ಸದ್ಗುಣಸಂಪನ್ನಳು, ದಿಟ್ಟ ವ್ಯಕ್ತಿತ್ವದವಳು. ಓದು ಮುಗಿಸಿ ತಂದೆಗೆ ಎಸ್ಟೇಟಿನ ಕೆಲಸದಲ್ಲಿ ಸಹಾಯ ಮಾಡಿಕೊಂಡು ಇರುತ್ತಾಳೆ. ಮಗಳಿಗೆ ಮದುವೆ ಮಾಡಬೇಕೆಂಬ ಆಲೋಚನೆ ಇರುವಾಗಲೇ ವಿದೇಶ ವ್ಯಾಸಂಗಕ್ಕಾಗಿ ಇಂದಿರಾ ತಂದೆಯ ಶಿಫಾರಸ್ಸು ಕೇಳಲು ಬಂದ ಪದವೀಧರ 'ಮೋಹನ' ಇಂದಿರಾಳನ್ನು ಮದುವೆಯಾಗಲು ಒಪ್ಪುತ್ತಾನೆ. ತನ್ನ ಎರಡು ವರ್ಷದ ವಿದೇಶದಲ್ಲಿ ವಿದ್ಯಾಭ್ಯಾಸ ಮುಗಿದ ಅನಂತರ ಮದುವೆ ಮಾಡಿಕೊಳ್ಳುವುದಾಗಿ ಮಾತು ಕೊಡುತ್ತಾನೆ. ಇಂದಿರಾ ಮೋಹನನನ್ನು ನಂಬುತ್ತಾಳೆ.

ಸದಾಶಿವರಾಯರು ತಮ್ಮ ಸ್ವಂತ ಖರ್ಚಿನಲ್ಲಿ ಮೋಹನನನ್ನು ಅಮೇರಿಕಾಕ್ಕೆ ಕಳುಹಿಸುತ್ತಾರೆ. ಈ ಸಂದರ್ಭದಲ್ಲಿ ಇಂದಿರಾಳ ತಾಯಿ ಒಂದು ಗಂಡುಮಗುವಿಗೆ ಜನ್ಮವಿತ್ತು ಮರಣಕ್ಕೀಡಾಗುತ್ತಾಳೆ. ಇಂದಿರಾ ತನ್ನ ತಮ್ಮನಿಗೆ ತಾನೇ ತಾಯಿಯಾಗಿ ಸಲಹುತ್ತಾಳೆ. ಮೋಹನನ ಆಗಮನಕ್ಕಾಗಿ ಕಾತುರಳಾಗಿದ್ದ ಇಂದಿರಾ ಅವನನ್ನು ನೋಡಿದ ಕ್ಷಣವೇ ಅವನಲ್ಲಾಗಿದ್ದ ಬದಲಾವಣೆಯನ್ನು ಗಮನಿಸಿ ಅವನ ಮನಸ್ಸನ್ನು ಅರ್ಥಮಾಡಿಕೊಳ್ಳುತ್ತಾಳೆ. ಮೋಹನ ಇಂದಿರಾಳನ್ನು ಮದುವೆಯಾಗಲು ನಿರಾಕರಿಸುತ್ತಾನೆ.

ತನ್ನ ಎಸ್ಟೇಟಿನ ಉತ್ತರಾಧಿಕಾರಿಯಾಗಲಿರುವ 'ಗಿರಿ'ಯೇ ಮೋಹನನ ಈ ಬದಲಾವಣೆಗೆ ಕಾರಣವೆಂಬುದನ್ನು ತಿಳಿದು ಶಾಂತಚಿತ್ತದಿಂದ ತನ್ನ ಮನಸ್ಸಿನ ಭಾವನೆಗಳನ್ನು ಅದುಮಿಟ್ಟು ಮೋಹನನನ್ನು ಉಳಿಸುವ ಸಲುವಾಗಿ ತಪ್ಪೆಲ್ಲ ತನ್ನದೆಂದೂ, ತನಗೆ ಮೋಹನನನ್ನು ಮದುವೆಯಾಗಲು ಇಷ್ಟವಿಲ್ಲವೆಂದು ತನ್ನ ತಂದೆಗೆ ಹೇಳುತ್ತಾಳೆ. ಈ ಸಂದರ್ಭದಲ್ಲಿಯೇ ಕಾಲುದಾರಿ ಬಿದ್ದ ಮೋಹನ ಕಾಲುಮುರಿದುಕೊಂಡಾಗ ಇಂದಿರಾ ಅವನಿಗೆ ನಿಸ್ವಾರ್ಥ ಸೇವೆ ಮಾಡುತ್ತಾಳೆ. ಮೋಹನ ಅವಳ ಒಳ್ಳೆಯ ಗುಣಗಳನ್ನು ಅರ್ಥಮಾಡಿಕೊಂಡು ಮದುವೆಯಾಗಲು ಬೇಡಿಕೊಳ್ಳುತ್ತಾನೆ. ಇಂದಿರ ದಿಟ್ಟ ನಿರ್ಧಾರದಿಂದ ಅವನನ್ನು ನಿರಾಕರಿಸುತ್ತಾಳೆ.

'ತವರೆಯ ಕೊಳ' ಕಾದಂಬರಿಯ ನಾಯಕಿ 'ರತ್ನ', ಪತಿ ವೈದ್ಯ ಶೇಷಾದ್ರಿ ಹಾಗೂ ಮಗಳಿಂದ ಕೂಡಿದ ಪುಟ್ಟ ಸಂಸಾರದಲ್ಲಿ ರತ್ನಳಿಗೆ ಸಾಂಸಾರಿಕ ಸುಖದಿಂದ ತೃಪ್ತಳಾಗಿ ಬದುಕ ಕೃತಕವೆನಿಸಿದ್ದ ಸಂದರ್ಭದಲ್ಲಿಯೇ ಮೈಸೂರಿನಲ್ಲಿದ್ದ 'ರಮೇಶ' ತನ್ನ ಪ್ರೀತಿಯ ಅತ್ತಿಗೆ ಸತ್ತ ನಂತರ ಜೀವನದಲ್ಲಿ ಆಸಕ್ತಿ ಕಳೆದುಕೊಂಡು ವಿದ್ಯಾಭ್ಯಾಸವನ್ನು ಮುಂದುವರಿಸಿದ. ಮಂಕಾಗಿದ್ದ ರಮೇಶ ವಾತಾವರಣ ಬದಲಾವಣೆಗೆಂದು ಅಣ್ಣನ ಸ್ನೇಹಿತರಾದ ಶೇಷಾದ್ರಿಯ ಮನೆಗೆ ಬರುತ್ತಾನೆ.

ರತ್ನ ಅತಿಥಿಯಾಗಿ ಮನೆಗೆ ಬಂದ ರಮೇಶನನ್ನು ಆದರಭಾವದಿಂದ ಸಲಹುತ್ತಾಳೆ. ಆತ್ಮೀಯತೆ, ಸ್ನೇಹ, ಪ್ರೀತಿಯಿಂದ ಅವನನ್ನು ಉಪಚರಿಸುತ್ತಾಳೆ. ರಮೇಶನಿಗೆ ಮತ್ತೆ ಬದುಕಿನಲ್ಲಿ ಆಸಕ್ತಿ ಮೂಡಿಸಲು ಪ್ರಯತ್ನಿಸುತ್ತಾಳೆ. ಈ ಸಂದರ್ಭದಲ್ಲಿಯೇ ಭಾವುಕನಾದ ರಮೇಶ ರತ್ನಳಲ್ಲಿ ಅನುರಕ್ತನಾಗುತ್ತಾನೆ. ರತ್ನಳಿಗೂ ಅವನಲ್ಲಿ ಪ್ರೀತಿ ಇದ್ದರೂ ಅವನ ಜೀವನವನ್ನು ಹಾಳುಮಾಡಲು ಬಯಸದೆ ಅವನಲ್ಲಿ ಆತ್ಮವಿಶ್ವಾಸ ತುಂಬಿ ಮತ್ತೆ ವೈದ್ಯಕೀಯ ವ್ಯಾಸಂಗದಲ್ಲಿ ಮುಂದುವರೆಯುವಂತೆ ಮಾಡಲು ಪ್ರಯತ್ನಿಸುತ್ತಾಳೆ. ರತ್ನ ತನ್ನ ಚಿಕ್ಕಪ್ಪನ ಮಗಳು ನಳಿನಿಯೊಂದಿಗೆ ರಮೇಶನ ವಿವಾಹ ನಡೆಸಲು ಪ್ರಯತ್ನಿಸುತ್ತಾಳೆ. ಆದರೆ ರತ್ನಳಲ್ಲಿ ಆಸಕ್ತನಾಗಿದ್ದ ರಮೇಶ ನಳಿನಿಯನ್ನು ಮದುವೆಯಾಗಲು ನಿರಾಕರಿಸುತ್ತಾನೆ. ರಮೇಶನೊಂದಿಗೆ ತನ್ನ ಅತಿ ಸ್ನೇಹವು

ಸರಿಯಲ್ಲವೆಂದು ನಿರ್ಧರಿಸಿದ ರತ್ನ ಅವನು ಮೈಸೂರಿಗೆ ಹಿಂತಿರುಗಿ ವೈದ್ಯನಾಗಬೇಕು ಜೊತೆಗೆ ಒಳ್ಳೆಯ ಹೆಣ್ಣೊಬ್ಬಳೊಂದಿಗೆ ವಿವಾಹವಾಗಬೇಕೆಂದು ಮಾತು ಪಡೆದುಕೊಂಡು ಅವನನ್ನು ಮೈಸೂರಿಗೆ ಕಳುಹಿಸುತ್ತಾಳೆ.

'ಹೆಣ್ಣಿಲೆ ಚಿಗುರಿದಾಗ' ಕಾದಂಬರಿಯಲ್ಲಿ ಬರುವ ಮುಖ್ಯವಾದ ಹೆಣ್ಣು ಪಾತ್ರವೆಂದರೆ 'ಮಾಲತಿ'. ನಿವೃತ್ತ ವಕೀಲರಾದ ರಾಯರ ಕೊನೆಯ ಮಗಳು ಮಾಲತಿ. ಮದುವೆಯಾದ ಕೆಲವೇ ತಿಂಗಳುಗಳಲ್ಲಿ ಗಂಡನನ್ನು ಕಳೆದುಕೊಂಡ ಮಾಲತಿ ಚಿಕ್ಕವಯಸ್ಸಿನಲ್ಲಿಯೇ ವಿದುರನಾದ ತನ್ನ ಅತ್ತಿಗೆಯ ತಮ್ಮ 'ಪ್ರಸಾದ'ನನ್ನು ಪ್ರೀತಿಸುತ್ತಾಳೆ. ಆದರೆ ಸಂಪ್ರದಾಯಸ್ಥರಾದ ರಾಯರು ಸ್ತ್ರೀಯ ಪುನರ್ವಿವಾಹವನ್ನು ಒಪ್ಪಲಾಗದೆ ಮಗಳ ವಿಚಾರವನ್ನೂ ವಿರೋಧಿಸುತ್ತಾರೆ. ಮಾಲತಿ ಹುಟ್ಟಿದಂದಿನಿಂದಲೂ ಸಾಕಿ ಸಲುಹಿದ ತಂದೆಯ ಮನಸ್ಸನ್ನು ನೋಯಿಸಲಾರದೆ, ಬಾಳಿನ ಮಧ್ಯೆ ಬಂದ ಪ್ರಿಯಕರನನ್ನು ಬಿಟ್ಟು ಅವಿವಾಹಿತಳಾಗಿಯೇ ಉಳಿಯಲು ನಿರ್ಧರಿಸುತ್ತಾಳೆ. ತಂದೆಯೇ ಪ್ರೇಮಿಗಿಂತ ಹೆಚ್ಚು ಎಂದು ಜೀವಮಾನವಿಡೀ ಏಕಾಂಗಿಯಾಗಿ ಬಾಳಲು ನಿರ್ಧರಿಸಿದ ಮಗಳ ನಿರ್ಧಾರವನ್ನು ಕೇಳಿದ ರಾಯರು ಮಗಳ ಭವಿಷ್ಯದ ಹಿತದೃಷ್ಟಿಯಿಂದ ಮನಸ್ಸು ಬದಲಾಯಿಸಿ ಮಗಳ ಮದುವೆಗೆ ಒಪ್ಪಿಗೆ ನೀಡುತ್ತಾರೆ.

'ಕುಸುಮ' ತ್ರಿವೇಣಿಯವರ ಜನಪ್ರಿಯ ಕಾದಂಬರಿ. 'ಬೆಕ್ಕಿನ ಕಣ್ಣು' ಕಾದಂಬರಿಯ ನಾಯಕಿ ಮದುವೆಯಾಗಿ ಐದು ವರ್ಷಗಳಾದರೂ ಮಕ್ಕಳಾಗದಿದ್ದ ಜಗನ್ನಾಥರಾಯರ ದಂಪತಿಗಳಿಗೆ ಹುಟ್ಟುವ ಒಬ್ಬಳೇ ಮಗಳು ಕುಸುಮ, ಬಹುದಿನಗಳ ಬಳಿಕ ಹುಟ್ಟಿದವಳಾದ್ದರಿಂದ ತಂದೆತಾಯಿ ಹಾಗೂ ಅಜ್ಜಿ, ಅತಿ, ಮುದ್ದಿನಿಂದ ಬೆಳೆಸುತ್ತಾರೆ. ಕುಸುಮ ಮನೆಯಲ್ಲಿ ಎಲ್ಲರ ಕಣ್ಮಣಿಯಾಗಿರುತ್ತಾಳೆ. ಕುಸುಮಾಳನ್ನು ಮನೆಯ ರಾಜಕುಮಾರಿಯಂತೆ ಕಂಡು ಅವಳ ಎಲ್ಲಾ ಕೋರಿಕೆಗಳನ್ನು ಈಡೇರಿಸುವುದೇ ಮನೆಯವರೆಲ್ಲರ ಮುಖ್ಯ ಕೆಲಸವಾಗಿರುತ್ತದೆ. ತನ್ನ ಹುಟ್ಟುಹಬ್ಬದ ಸಂದರ್ಭದಲ್ಲಿ ತರಿಸಿಕೊಂಡ ಪಾಲಿ ಎಂಬ ಬೆಕ್ಕು ಮತ್ತು ಜಿಮ್ಮಿ ಎಂಬ ನಾಯಿ ಇವುಗಳನ್ನು ಕಂಡರೆ ಕುಸುಮಾಗೆ ತುಂಬ ಪ್ರೀತಿ. ಹೀಗೆ ಹಿರಿಯರ ಅತಿ ಪ್ರೀತಿ ಹಾಗೂ ಮಮತೆಯ ಪರಿಸರದಲ್ಲಿ ಚಿಂತೆಯಿಲ್ಲದೆ ಸ್ವೇಚ್ಛೆಯಾಗಿ ಬೆಳೆದ ಕುಸುಮ ತನ್ನ ಐದನೆ ವಯಸ್ಸಿನಲ್ಲಿ ಅಜ್ಜಿಯ ಸಾವಿನಿಂದ ಆಘಾತಕ್ಕೊಳಗಾಗಿ ಚೇತರಿಸಿಕೊಳ್ಳುವಷ್ಟರಲ್ಲಿ ಅವಳ ತಾಯಿಯನ್ನು ಕಳೆದುಕೊಳ್ಳುತ್ತಾಳೆ. ಅವಳಿಗೆ ಏಳು ವರ್ಷ ತುಂಬುವುದರೊಳಗೆ ಅಜ್ಜಿ ತಾಯಿ ಇಬ್ಬರನ್ನು ಕಳೆದುಕೊಂಡು ನಂತರದ ಮೂರು ವರ್ಷಗಳ ಕಾಲ ತಂದೆಯ ಆರೈಕೆಯಲ್ಲಿ ಬೆಳೆಯುತ್ತಾಳೆ.

ಬಾಲ್ಯದ ಈ ಹತ್ತು ವರ್ಷಗಳು ತನ್ನ ಮನಸ್ಸಿನ ಮೇಲೆ ಉಂಟುಮಾಡಿದ ಪರಿಣಾಮದಿಂದ ಕುಸುಮ ಎಲ್ಲ ಮಕ್ಕಳಂತಿರದೆ ಸರ್ವಸ್ವತಂತ್ರಳಾಗುತ್ತಾಳೆ. ತಾನೇ ತನ್ನ ಮನೆಯಲ್ಲಿ ಸರ್ವಾಧಿಕಾರಿಣಿ ಎಂಬ ಭಾವನೆ ಅವಳಲ್ಲಿ ಮೂಡುತ್ತದೆ. ಮುಂದಾಲೋಚನೆಯಿಲ್ಲದೆ ತಾಯಿ ಇಲ್ಲದ ಮಗುವೆಂದು ಅವಳ ತಂದೆ ಮತ್ತಷ್ಟು ಪ್ರೀತಿ, ಮಿತಿಮೀರಿದ ಸಲಿಗೆ, ಸ್ವಾತಂತ್ರ್ಯ ಇವುಗಳಿಂದ ಪೋಷಿತಳಾಗಿ ಬೆಳೆದ ಕುಸುಮಳಿಗೆ ಅವಳ ತಂದೆ ಮಾಡಿಕೊಳ್ಳುವ ಎರಡನೆಯ ಮದುವೆ ಬರಸಿಡಿಲಿನಂತೆ ಅವಳ ಮನಸ್ಸಿಗೆ ತೀವ್ರ ಆಘಾತವನ್ನುಂಟು ಮಾಡುತ್ತದೆ.

ತನ್ನ ತಂದೆಯ ಎರಡನೆಯ ಹೆಂಡತಿಯಾಗಿ ಬಂದ ಪದ್ಮಳ ಬಗ್ಗೆ ಮೊದಲ ದಿನವೇ ಅವಳ ನಡವಳಿಕೆಯಿಂದ ಕುಸುಮಳಲ್ಲಿ ಒಂದು ರೀತಿಯ ಭಯ, ದ್ವೇಷ ಉಂಟಾಗಿರುತ್ತದೆ. ತನ್ನ ಪ್ರೀತಿಯ ತಾಯಿಯ ಜಾಗದಲ್ಲಿ ಬೇರಾರೂ ಬರಲು ಸಾಧ್ಯವೇ ಇಲ್ಲ ಎಂಬ ಮನೋಭಾವ ಅವಳಲ್ಲಿರುತ್ತದೆ. ಮದುವೆಯ ದಿನ ಪದ್ಮ ತನ್ನ ತೊಡೆಯ ಮೇಲೆ ಕುಳಿತ ಕುಸುಮಾಳನ್ನು ಸಿಟ್ಟು ದ್ವೇಷದಿಂದ ಬಲವಾಗಿ ತಳ್ಳುತ್ತಾಳೆ. ಕುಸುಮ ತನ್ನ ಜೀವನದಲ್ಲಿ ಮೊದಲ ಬಾರಿ ಅನಾದರ, ತಿರಸ್ಕಾರ, ಅವಮಾನದ ನೋವನ್ನು ಅನುಭವಿಸುವ ಆ ಸಂದರ್ಭದಲ್ಲಿ ಅವಳ ಕಣ್ಣಲ್ಲಿ ನೀರಿರದೆ ದ್ವೇಷ, ರೋಷದಿಂದ ಉರಿಯುತ್ತದೆ. ಅನಂತರ ಅವಳಿಗೆ ತನ್ನ ಚಿಕ್ಕಮ್ಮನಲ್ಲಿ ಎಂದೂ ಪ್ರೀತಿ ಭಾವನೆ ಬೆಳೆಯಲು ಸಾಧ್ಯವಾಗುವುದಿಲ್ಲ.

ಎರಡನೆಯ ಮದುವೆಯ ನಂತರ ಕುಸುಮಳ ತಂದೆಯು ಅವಳಲ್ಲಿ ಉದಾಸೀನರಾಗುತ್ತಾರೆ. ಅವಳಿಗೆ ಕೊಡುತ್ತಿದ್ದ ಖರ್ಚಿನ ಹಣವನ್ನು ಕೊಡುವುದ ನಿಲ್ಲಿಸುತ್ತಾರೆ. ಕುಸುಮ ತನ್ನ ಬೆಕ್ಕು, ನಾಯಿ ಸಾಕಲು ಹಣಕ್ಕಾಗಿ ಶಾಲೆಯಲ್ಲಿ ಕಳ್ಳತನ ಪ್ರಾರಂಭಿಸುತ್ತಾಳೆ. ಅಲ್ಲದೆ ಮನೆಯಲ್ಲಿ ಮಲತಾಯಿಯ ಕಿರುಕುಳ ದಿನದಿಂದ ದಿನಕ್ಕೆ ಹೆಚ್ಚಿ ಅವಳ ಚಿಕ್ಕಮ್ಮ ಅವಳಿಗೆ ಅನ್ನ ನೀರು ಕೊಡದೆ ಹಿಂಸಿಸುತ್ತಾಳೆ. ಸ್ವಾತಂತ್ರ್ಯ, ಸಲಿಗೆ ಹಾಗೂ ಪ್ರೇಮದ ಪರಿಸರದಲ್ಲಿ ಬೆಳೆದ ಕುಸುಮ ಕ್ರಮೇಣ ಉಪೇಕ್ಷೆಗೆ ಗುರಿಯಾಗಿ, ಸೇಡಿನ ಕಿಡಿಯಾಗಿ ದ್ವೇಷದ ಭಾವನೆಗಳನ್ನು ಮನಸ್ಸಿನಿಂದ ಹೊರಹಾಕಲು ದಾರಿ ಕಾಣದೆ, ತಾನು ದ್ವೇಷಿಸುತ್ತಿದ್ದ ಬೆಕ್ಕಿನ ಕಣ್ಣಿನ ಮಲತಾಯಿ ಪದ್ಮಳನ್ನು ಹೊಡೆದು ಸೇಡು ತೀರಿಸಿಕೊಳ್ಳಲಾರದೆ ತನ್ನ ಮುದ್ದಿನ ಬೆಕ್ಕು 'ಪಾಲಿ'ಯನ್ನು ಹೊಡೆದು ಹಿಂಸಿಸುತ್ತಾಳೆ. ಹಾಗೆ ಶಾಲೆಯಲ್ಲಿ ತನ್ನ ಸಹಪಾಠಿ ಬೆಕ್ಕಿನಕಣ್ಣಿನ ಸೊಸಾನಳನ್ನು ಹೊಡೆಯುತ್ತಾಳೆ. ದಿನದಿಂದ ದಿನಕ್ಕೆ ಕುಸುಮಳ ಕೊರಗು ಅಸಾಯಕತೆ ಎಲ್ಲೆ ಮೀರಿ 'ಅನಾಥಪ್ರಜ್ಞೆ' ಉಂಟಾಗಿ ಅವಳಿಗೆ ಹದಿನೇಳು ವರ್ಷವಾಗುವಷ್ಟರಲ್ಲಿ ತೀವ್ರವಾದ ಮನೋರೋಗಕ್ಕೆ ಗುರಿಯಾಗುತ್ತಾಳೆ.

ಅನಂತರದಲ್ಲಿ ಮನೋರೋಗಿಯಾದ ಕುಸುಮ ಮಾನಸಿಕ ಚಿಕಿತ್ಸಾಕೇಂದ್ರವನ್ನು ಪ್ರವೇಶಿಸುತ್ತಾಳೆ. ಕುಸುಮಳಲ್ಲಿ ಅನುಕಂಪ, ಸಹಾನುಭೂತಿ ಹಾಗೂ ಅವಳಲ್ಲಿ ಆಸಕ್ತನಾದ ಅವಳ ಮಲತಾಯಿಯ ತಮ್ಮ ಮನಃಶಾಸ್ತ್ರದ ವಿದ್ಯಾರ್ಥಿ ರಾಜಶೇಖರನು ಅವಳ ಚಿಕಿತ್ಸೆಯ ಬಗ್ಗೆ ಕಾತುರ ಕಾಳಜಿಗಳಿಂದ ಅವಳ ಆರೋಗ್ಯ ಗುಣವಾಗಲು ಕಾರಣನಾಗುತ್ತಾನೆ. ಪದ್ಮಳು ವೈದ್ಯರು ಮನವರಿಕೆ ಮಾಡಿಕೊಟ್ಟನಂತರ ಅವಳ ತಪ್ಪಿನ ಅರಿವಾಗುತ್ತದೆ. ಕುಸುಮ ಗುಣಮುಖಳಾಗಿ ಮನೆಗೆ ಹಿಂದಿರುಗುತ್ತಾಳೆ.

'ಸುನಂದಾ' 'ದೂರದಬೆಟ್ಟ' ಕಾದಂಬರಿಯ ನಾಯಕಿ ಇವಳು ಹತ್ತೊಂಬತ್ತರ ಹರೆಯದಲ್ಲಿ ಗಂಡ ಶೇಖರನನ್ನು ಕಳೆದುಕೊಂಡು ವಿಧವೆಯಾಗುತ್ತಾಳೆ. ಅವಳ ಅಣ್ಣ ಸೀತಾರಾಮುವಿನ ಪ್ರೋತ್ಸಾಹದಿಂದ ಪದವೀಧರೆಯಾಗಿ ಹೈಸ್ಕೂಲೊಂದರಲ್ಲಿ ಶಿಕ್ಷಕಿಯಾಗುತ್ತಾಳೆ. ಕಡೆಗೆ ಅಣ್ಣನ ಸ್ನೇಹಿತ 'ಶ್ರೀಧರ'ನನ್ನು ಮದುವೆಯಾಗಲು ಒಪ್ಪುತ್ತಾಳೆ. ಆದರೆ ಅವಳೆಣಿಸಿದಂತೆ ಮರುಮದುವೆ ಸುಲಭವಾಗುವುದಿಲ್ಲ. ಸುನಂದ ನಿದ್ರಾಭ್ರಮಣೆಗೊಳಗಾಗಿ ಸತ್ತ ತನ್ನ ಗಂಡನ ನೆನಪನ್ನು ತರುವ ವಸ್ತುಗಳನ್ನು ಒಂದೊಂದಾಗಿ ಬಾವಿಗೆ ಹಾಕುತ್ತಾಳೆ. "ಸುಪ್ತ ಮನಸ್ಸಿನಲ್ಲಿಡಗಿರುವ ಆಸೆ, ಆಕಾಂಕ್ಷೆಗಳು ರಾತ್ರಿ ಕನಸಿನ ರೂಪದಲ್ಲಿ ಕಾಡುತ್ತವೆ. ಅವಳ ಜಾಗೃತ ಮನಸ್ಸು ಮರುಮದುವೆಗೆ ಒಪ್ಪಿದರೂ, ಸುಪ್ತ ಮನಸ್ಸು ವಿಧವಾವಿವಾಹವನ್ನು ಪ್ರತಿಭಟಿಸುತ್ತದೆ." ಹೆಣ್ಣು ಮದುವೆಯಾಗುವುದು ಒಂದೇ ಸಲ ಎಂಬುದನ್ನು ಒಪ್ಪಿಕೊಂಡಿರುವ ಅವಳ ಸಾಂಪ್ರದಾಯಿಕ ಸುಪ್ತಮನಸ್ಸಿನ ಚಿಂತನೆಯು ಕನಸುಗಳ ಮೂಲಕ ವ್ಯಕ್ತವಾಗುತ್ತದೆ. ಸುನಂದ ನಿದ್ರಾಭ್ರಮಣೆಗೆ ಕಾರಣ ಹಾಗೂ ತನಗೆ ಬೀಳುತಿದ್ದ ಕನಸುಗಳ ಅರ್ಥವನ್ನು ತಿಳಿಯಲು ಮನಶಾಸ್ತ್ರದ ಪ್ರಾಧ್ಯಾಪಕರನ್ನು ತಾನಾಗಿಯೇ ಹೋಗಿ ಅವರನ್ನು ಕಂಡು ಅವರಲ್ಲಿ ತನ್ನ ಸಮಸ್ಯೆಗಳನ್ನು ಹೇಳಿಕೊಳ್ಳುತ್ತಾಳೆ.

ಮನಶಾಸ್ತ್ರಜ್ಞರು ಸುನಂದಾಳಿಗೆ ಸೂಕ್ತ ಸಲಹೆ, ನಂಬಿಕೆ, ವಿಶ್ವಾಸವನ್ನು ತುಂಬುತ್ತಾರೆ. ಅವಳು ಮತ್ತೆ ಮದುವೆಯಾಗುವುದು ಯಾವುದೇ ರೀತಿಯಿಂದ ಅಪರಾಧವಲ್ಲ. ಸಮಾಜದ ಹಿತದೃಷ್ಟಿಯಿಂದ, ಪ್ರಾಯದ ಹೆಣ್ಣಿನ ಭವಿಷ್ಯದ ಹಿತದೃಷ್ಟಿಯಿಂದ ಮರುಮದುವೆಯಾಗುವುದು ತಪ್ಪಲ್ಲವೆಂಬ ವಿಷಯವನ್ನು ಸಮಾಧಾನದಿಂದ ಅವಳ ಆಂತರಿಕ ಪ್ರಜ್ಞೆಗೆ ಮುಟ್ಟುವಂತೆ ತಿಳಿಸುತ್ತಾರೆ. ಈ ರೀತಿಯ ಚಿಕಿತ್ಸಕ ಸಲಹೆಯಿಂದ ಕನಸುಗಳ ವಿವರಣೆ ವಿಶ್ಲೇಷಣೆಯಿಂದ ಸುನಂದಳ ಕದಡಿದ ಮನಸ್ಸು ಕ್ರಮೇಣ ತಿಳಿಯಾಗುತ್ತದೆ. ಗುಣಮುಖಳಾಗಿ ಸುನಂದ ಶ್ರೀಧರನನ್ನು ಮದುವೆಯಾಗುತ್ತಾಳೆ.

'ಕಾವೇರಿ' ಇವಳು 'ಶರಪಂಜರ' ಕಾದಂಬರಿಯ ನಾಯಕಿ. ಕಾವೇರಿಯ ಗಂಡ 'ಸತೀಶ' ಸರ್ಕಾರಿ ಅಧಿಕಾರಿಯಾಗಿದ್ದು ಸಾಕಷ್ಟು ಅನುಕೂಲಸ್ಥನಾಗಿರುತ್ತಾನೆ. ಅತಿ ರೂಪವತಿಯಾದ ಕಾವೇರಿಯನ್ನು ಬಯಸಿ ಮದುವೆಯಾಗುತ್ತಾನೆ. ಕಾವೇರಿ–ಸತೀಶರದು ಸುಂದರ ಸಂಸಾರ, ಆದರ್ಶ ದಾಂಪತ್ಯ, ರೂಪಸಿ, ಸೂಕ್ಷ್ಮಮತಿ, ಚತುರೆಯಾದ ಕಾವೇರಿಯ ಸಂಸಾರ ಅವಳಿಗೆ ಒಂದು ಮಗುವಾಗುವವರೆಗೆ ನೋಡಿದವರ ಕಣ್ಣು ಕುಕ್ಕುವಷ್ಟು ಸುಖಸಂತೋಷಗಳಿಂದ ಕೂಡಿರುತ್ತದೆ. ಎರಡನೆಯ ಮಗುವಿನ ಬಾಣಂತನದಲ್ಲಿ ಕಾವೇರಿ ದೈಹಿಕವಾಗಿ ಮತ್ತು ಮಾನಸಿಕವಾಗಿ ದುರ್ಬಲಳಾಗಿ 'ಹಿಸ್ಟೀರಿಯಾ' ರೋಗಕ್ಕೆ ಬಲಿಯಾಗುತ್ತಾಳೆ. ಮದುವೆಗೆ ಮೊದಲೇ ಕಾವೇರಿಯು ತನ್ನ ಸೋದರತ್ತೆಯ ಮಗ ವಿವೇಕನ ಕಾಮತೃಷೆಗೆ ಬಲಿಯಾದ ವಿಷಯವನ್ನು ಮದುವೆಯ ನಂತರ ಅನುಭವಿಸಿದ ಸುಖದಲ್ಲಿ ಮರೆತಿರುತ್ತಾಳೆ ದೇಹ ದುರ್ಬಲವಾದಾಗ ಅವಳ ಸುಪ್ತಾಚೇತನದಲ್ಲಿ ಅಡಗಿದ್ದ ಈ ರಹಸ್ಯ ಸ್ಫೋಟವಾಗಿ, ಅವಳ ಮನಸ್ಸಿನ ಮೇಲೆ ವಿಶೇಷ ಪರಿಣಾಮ ಬೀರುವುದರಿಂದ ಅವಳ ಉನ್ಮಾದ ಹೆಚ್ಚಿ ಮಾನಸಿಕ ಆರೋಗ್ಯ ಕೇಂದ್ರ ಸೇರುತ್ತಾಳೆ. ವೈದ್ಯರ ಮನೋತಜ್ಞರ ಚಿಕಿತ್ಸೆಯಿಂದಾಗಿ ಚೇತರಿಸಿಕೊಂಡು ಮನೆಗೆ ಹಿಂತಿರುಗುತ್ತಾಳೆ.

ಮನೆಗೆ ಮರಳಿದ ಕಾವೇರಿ ಎಲ್ಲವನ್ನು ಮರೆತು ಮತ್ತೆ ಗಂಡ, ಮಕ್ಕಳೊಂದಿಗೆ ಸುಖ ಜೀವನ ನಡೆಸುವ ಹಂಬಲ ಹೊಂದಿರುತ್ತಾಳೆ. ಆದರೆ ಸತೀಶನಾಗಲೀ, ಈ ಸಮಾಜವಾಗಲಿ ಅವಳನ್ನು ಮೊದಲಿನಂತೆ ಕಾಣುವುದಿಲ್ಲ. ಅವಳ ಗಂಡ, ಮಕ್ಕಳು ಮತ್ತು ಇತರರು ಅವಳನ್ನು ಇನ್ನೂ ರೋಗಿಯೆಂದೇ ಸಂದೇಹ, ಭಯ ಹಾಗೂ ತಿರಸ್ಕಾರಗಳಿಂದ ಕಾಣುತ್ತಾರೆ. ಅವಳೊಡನೆ ದೈಹಿಕ ಸಂಪರ್ಕವನ್ನು ಸಂಪೂರ್ಣವಾಗಿ ಕಡಿದುಕೊಂಡು ದೊಡ್ಡ ಮಗನನ್ನು ಬೋರ್ಡಿಂಗ್ ಸ್ಕೂಲಿಗೆ ಅವಳ ಗಂಡ ಸೇರಿಸುತ್ತಾನೆ. ಸ್ವಾಭಿಮಾನಿಯಾದ ಕಾವೇರಿಗೆ ಜನರ ಪಶ್ಚಾತ್ತಾಪ ಸಹಾನುಭೂತಿ, ಮರುಕ ಇವು ಯಾವುದು ಬೇಕಾಗಿರಲಿಲ್ಲ. ಮಾನಸಿಕ ಆರೋಗ್ಯವನ್ನು ಪಡೆದು ಮತ್ತೆ ಸಮಾಜವನ್ನು ಸೇರಿದ ಅವಳು ಜನರಿಂದ ಮುಂಚಿನ ಸ್ನೇಹ, ವಿಶ್ವಾಸ ಆದರ ಗೌರವಗಳನ್ನು ಬಯಸುತ್ತಾಳೆ. ಆದರೆ ಸಮಾಜ ಅವುಗಳನ್ನು ಅವಳಿಗೆ ನೀಡುವಷ್ಟು ಸುಶಿಕ್ಷಿತವಾಗಿರುವುದಿಲ್ಲ. ಮನೆಯಲ್ಲಿ ತನಗೆ ಹಿಂದಿದ್ದ ಸರ್ವಾಧಿಕಾರ, ಅಂತಸ್ತು, ಮಕ್ಕಳ ಮತ್ತು ಗಂಡನ ಪ್ರೀತಿ, ವಿಶ್ವಾಸ ಬಯಸುತ್ತಾಳೆ. ಜನರ ತಾತ್ಸಾರದ, ಪಿಸುಮಾತಿನ ಬಾಣಗಳು ಮನಸ್ಸಿನ ಲಕ್ಷ್ಯಕ್ಕೆ ಬಿದ್ದರೂ ಸ್ಥೈರಿಸಿಕೊಂಡ ಕಾವೇರಿ, "ಮೇಲೆ ಬಿದ್ದ ಸೂಳೆ ಮೂರು ಕಾಸಿಗೂ ಬೇಡ" ಅನ್ನುತ್ತಿದ್ದ ಗಂಡ ಈಗ ಮೇಲೆ ಬಿದ್ದ ಪರಸ್ತ್ರೀಯ ಸಂಬಂಧ ಬಯಸಿ ಅವಳ

ಮನೆಗೆ ಹೋದಾಗ ಕಾವೇರಿಯ ಮನೋರೋಗ ಮತ್ತೆ ಮರುಕಳಿಸಿ ಅದರಿಂದ ಎಂದೆಂದಿಗೂ ಹೊರಬರಲಾಗದಂತೆ ಮತ್ತೆ ಹುಚ್ಚಾಸ್ಪತ್ರೆಯನ್ನು ಸೇರುತ್ತಾಳೆ.

'ಅವಳ ಮನೆ' ಕಾದಂಬರಿಯ ನಾಯಕಿ 'ಸರೋಜಿನಿ'. ಬಡತಂದೆ ತಾಯಿಗಳ ನಾಲ್ಕು ಜನ ಹೆಣ್ಣುಮಕ್ಕಳಲ್ಲಿ ಒಬ್ಬಳು. ಬಡತನದ ಬವಣೆಯನ್ನು ತಾಳಲಾರದೆ ಇವಳ ತಂದೆ ತಾಯಿಗಳಿಂದ ಬೇರೆಯವರಿಗೆ ದಾನವಾಗಿ ಕೊಡಲ್ಪಟ್ಟು ಶ್ರೀಮಂತರ ಮನೆ ಸೇರುತ್ತಾಳೆ. ಅಲ್ಲಿ ಊಟ, ಬಟ್ಟೆ, ವಿದ್ಯಾಭ್ಯಾಸಕ್ಕೆ ಅನುಕೂಲವಾಗಿದ್ದರೂ ತಂದೆ ತಾಯಿಗಳಿಗೆ ಬೇಡವಾದ ಮಗಳು ನಾನು ಎಂಬ ಕೊರಗಿರುತ್ತದೆ. ಈ ಕಡೆ ಹೆತ್ತವರ ಪ್ರೇಮವನ್ನು ಕಳೆದುಕೊಂಡು ಆ ಕಡೆ ಹೊಸ ವಾತಾವರಣಕ್ಕೆ ಹೊಂದಿಕೊಳ್ಳಲಾರದೆ ತನ್ನ ಮನೆ ಯಾವುದು ತನ್ನ ಅಸ್ತಿತ್ವದ ನೆಲೆಯನ್ನು ಹಂಬಲಿಸುವ ಸರೋಜಿನಿಗೆ ದತ್ತು ತೆಗೆದುಕೊಂಡವರ ಮನೆ ತನ್ನದೆಂದು ಎನಿಸುವುದಿಲ್ಲ. ಈ ತೊಳಲಾಟದಲ್ಲಿಯೇ ಬೆಳೆದ ಸರೋಜಿನಿಗೆ ತನ್ನದಾದ ಒಂದು ಪುಟ್ಟ ಮನೆಯಾಗಬೇಕು ಎಂಬ ಕನಸ್ಸು ಕಾಣುತ್ತಾಳೆ ಕಡೆಗೆ ತಾನು ಪ್ರೀತಿಸಿ ಕೈಹಿಡಿಯುವ ಮಾಧವನ ಹೃದಯದಲ್ಲಿ ಮನೆ ಮಾಡಿಕೊಳ್ಳುತ್ತಾಳೆ.

'ಕಾಶೀಯಾತ್ರೆ' ಕಾದಂಬರಿಯಲ್ಲಿ ಬರುವ ಪ್ರಮುಖ ಸ್ತ್ರೀ ಪಾತ್ರ 'ಪಾತಜ್ಜಿ' ಬಾಲ್ಯದಲ್ಲೇ ಗಂಡನನ್ನು ಕಳೆದುಕೊಂಡು ಮಕ್ಕಳು ಮರಿ ಇಲ್ಲದ ವಿಧವೆ ಪಾತಜ್ಜಿ ಅವರಿವರ ಮನೆಯಲ್ಲಿ ಮನೆ ಕೆಲಸ ಮಾಡಿ ಬದುಕು ಸಾಗಿಸುತ್ತಿರುತ್ತಾಳೆ. ಪಾತಜ್ಜಿಯ ಬಾಳಿಕ ಏಕೈಕ ಹಂಬಲವೆಂದರೆ ಜೀವನದಲ್ಲಿ ಒಮ್ಮೆ ಕಾಶೀಯಾತ್ರೆ ಮಾಡುವುದು ಅದಕ್ಕಾಗಿ ತಾನು ಜೀವನವೆಲ್ಲಾ ದುಡಿದು ಕಾಸಿಗೆ ಕಾಸು ಸೇರಿಸಿ ಹಣವನ್ನು ಕೂಡಿಡುತ್ತಾಳೆ. ಯಾವಾಗಲು ಜನರ ಕಷ್ಟ ಸುಖಗಳಿಗಾಗುತ್ತಿದ್ದ ಪಾತಜ್ಜಿ ಕಡೆಗೆ "ಜನಸೇವೆಯೇ ಜನಾರ್ಧನನ ಸೇವೆ" ಎಂದು ಭಾವಿಸಿ ಕಾಶೀಯಾತ್ರೆಗೆಂದು ತಾನು ಕೂಡಿಟ್ಟಿದ್ದ ಹಣವನ್ನು ತಬ್ಬಲಿಯ ಹುಡುಗಿ ಮಂಗಳೆಯ ವಿವಾಹಕ್ಕೆ ನೀಡುತ್ತಾಳೆ. ಕನ್ಯಾದಾನದ ಪುಣ್ಯ ಕಾಶೀಯಾತ್ರೆಯ ಪುಣ್ಯಕ್ಕಿಂತ ದೊಡ್ಡದು ಎಂದು ಸಂತೋಷದಿಂದ ಹಿಗ್ಗುವ ಪಾತಜ್ಜಿಯಂತಹ ಹಿರಿಯ ವ್ಯಕ್ತಿಗಳು ಅಪರೂಪ.

'ಹೃದಯಗೀತ' ಕಾದಂಬರಿಯಲ್ಲಿ ಬರುವ ಪ್ರಮುಖ ಹೆಣ್ಣು ಪಾತ್ರಗಳೆಂದರೆ ಪದ್ಮಿನಿ ಮತ್ತು ಗೀತ ಇವರಿಬ್ಬರು ಸ್ನೇಹಿತರು. ಪದ್ಮಿನಿ ಚಿಕ್ಕ ವಯಸ್ಸಿನ ಯುವತಿ, ತನ್ನ ಸ್ನೇಹಿತೆ ಗೀತಾಳ ತಂದೆ ನಲ್ವತ್ತು ವರ್ಷದ ವಿಧುರನಾದ ಮೂರ್ತಿಯನ್ನು ಮದುವೆಯಾಗುತ್ತಾಳೆ. ಶ್ರೀಮಂತರಾದ ವೃದ್ಧರನ್ನು ಸಾಮಾಜಿಕ ಒತ್ತಡಗಳಿಂದ

ಯುವತಿಯರು ಹಿರಿಯರ ಬಲವಂತಕ್ಕಾಗಿ ಮದುವೆಯಾಗುವುದು ನಮ್ಮ ಸಮಾಜದಲ್ಲಿ ಹೊಸದೇನಲ್ಲ. ಆದರೆ, ಯುವತಿಯೇ ಸ್ವಇಚ್ಛೆಯಿಂದ ಒಲಿದು ತನ್ನ ಎರಡರಷ್ಟು ವಯಸ್ಸಿನವನನ್ನು ಮದುವೆಯಾಗುತ್ತಾಳೆ.

ಇನ್ನೂ ಮೂರ್ತಿಯ ಮಗಳು ಗೀತ ಅವಳು ವಿಶ್ವನಾಥನೆಂಬುವನ್ನು ಪ್ರೀತಿಸುತ್ತಾಳೆ. ಮೂರ್ತಿ ಎರಡನೆಯ ಮದುವೆಯಾದರೆ ಗೀತಾಳಿಗೆ ಬರುವ ಆಸ್ತಿ ಪಾಲಾಗುವುದೆಂದು ವಿಶ್ವನಾಥಮೂರ್ತಿಯ ಮರುಂದುವೆಯನ್ನು ಪತಿಬಟಿಸುತ್ತಾನೆ. ಆದರೆ ಗೀತ ಆಸ್ತಿ ಪಾಲಾದರೂ ಚಿಂತೆಯಿಲ್ಲ ತಂದೆಯ ಸಂತೋಷವೇ ತನ್ನ ಸಂತೋಷವೆಂದು ವಿಶ್ವನಾಥನೊಡನೆ ವಾದಿಸಿ ತಂದೆಯ ಸಂತೋಷಕ್ಕಾಗಿ ತನ್ನ ಪ್ರೇಮಿಯನ್ನು ಬಿಡಲು ಅವಳ ಸಿದ್ಧಳಾಗುತ್ತಾಳೆ. ಕಡೆಗೆ ಗೀತ ತಂದೆಯ ಮರುಮದುವೆಗೆ ಒಪ್ಪಿಗೆ ಕೊಡುತ್ತಾಳೆ.

'ಕಲ್ಯಾಣಿ' ಇವಳು 'ಬಾನು ಬೆಳಗಿತು' ಕಾದಂಬರಿಯ ನಾಯಕಿ ಆಗತಾನೆ ಸಂಸಾರದಲ್ಲಿ ಕಾಲಿಡುತ್ತಿರುವ ನವವಿವಾಹಿತೆ. ಮದುವೆಯಾದ ಹೊಸದರಲ್ಲಿ ಗಂಡ-ಹೆಂಡತಿ ಪ್ರೀತಿಯ ಪ್ರದರ್ಶನ ಹಾಗೂ ಸಾಂಸಾರಿಕ ಸುಖ ಅತಿಯೆನಿಸುವಷ್ಟು ಇದ್ದದ್ದು, ಕಾಲಕಳೆದಂತೆ ಅವಳ ವೈವಾಹಿಕ ಹಾಗೂ ಲೈಂಗಿಕ ಜೀವನ ಯಾಂತ್ರಿಕವೆನಿಸುತ್ತದೆ. ಸಿಹಿ ಹೆಚ್ಚಾದಷ್ಟು ಅಜೀರ್ಣವಾಗುವಂತೆ ಅವಳಿಗೆ ದಾಂಪತ್ಯ ಜೀವನ ಬೇಸರವೆನಿಸುತ್ತದೆ.

'ವಸಂತಗಾನ' ಕಾದಂಬರಿಯ ನಾಯಕಿ 'ಸರಳ' ವಿವಾಹವಾದ ಇವಳು ಪತಿ ವಾಸು ಜೀವನದಲ್ಲಿ ಸುಖಪಡುವುದೇ ಬಾಳಿನ ಗುರಿಯೆಂದು ನಂಬಿರುತ್ತಾರೆ. ಮೇಲುನೋಟಕ್ಕೆ ಗಂಡ-ಹೆಂಡತಿಯರು ಒಬ್ಬರನ್ನೊಬ್ಬರ ಅರ್ಥ ಮಾಡಿಕೊಂಡಿರುವಂತೆ ಕಂಡರೂ ಇವರಿಬ್ಬರ ಹತ್ತಿರದ ಸಂಬಂಧಿಗಳಾದ ರಾಜಗೋಪಾಲ ಮತ್ತು ಅರುಂಧತಿ ಇವರೊಡನೆ ಸರಳ ಮತ್ತು ವಾಸು ಸಲಿಗೆಯಿಂದ ವರ್ತಿಸುವಾಗ, ಗಂಡ-ಹೆಂಡಿರು ತಮ್ಮ ತಮ್ಮಲ್ಲಿಯೇ ಸಂಶಯವನ್ನು ತಾಳುತ್ತಾರೆ. ಕಡೆಗೆ ರಾಜಗೋಪಾಲ ಮತ್ತು ಅರುಂಧತಿ ಮದುವೆಯಾಗಲು ನಿರ್ಧರಿಸಿದಾಗ ವಾಸು ಮತ್ತು ಸರಳ ತಮ್ಮ ತಮ್ಮ ಸಂಶಯಗಳನ್ನು ನಿವಾರಣೆ ಮಾಡಿಕೊಳ್ಳುತ್ತಾರೆ.

ತ್ರಿವೇಣಿಯವರ ಕೃತಿಯ ಕೊನೆಯ ನಾಯಕಿಯೆಂದರೆ 'ವನಜ'. ವಿವಾಹಪೂರ್ವದಲ್ಲೇ ಶ್ರೀಕಂಠನೆಂಬ ಯುವಕನನು ಪ್ರೀತಿಸಿದ ವನಜ ವಾಮನರಾಯರ ಹೆಂಡತಿಯಾಗುತ್ತಾಳೆ. ಮೊದಲ ಹೆರಿಗೆಗೆ ತವರಿಗೆ ಬಂದ ವನಜಳು ಮತ್ತೆ 'ಶ್ರೀಕಂಠ'ನನ್ನು ಬಯಸುತ್ತಾಳೆ. ಹೆಂಡತಿಯ ಈ ಅನೈತಿಕ ವ್ಯವಹಾರವು

ವಾಮನರಾಯರ ಗಮನಕ್ಕೆ ಬಂದು ತಡೆಯಲು ಪ್ರಯತ್ನಿಸುತ್ತಾರೆ. ಆದರೆ ವನಜ ಶ್ರೀಕಂಠನನ್ನು ಬಿಡಲಾರದವಳಾಗಿ ಗಂಡ, ಮಗಳನ್ನೂ ಬಿಟ್ಟು ಶ್ರೀಕಂಠನೊಂದಿಗೆ ಓಡಿಹೋಗುತ್ತಾಳೆ.

ವಾಮನರಾಯರು ಮಗಳು ಭವಾನಿಯನ್ನು ಕಟ್ಟುನಿಟ್ಟಾಗಿ ಶಿಸ್ತಿನಿಂದ ಬೆಳೆಸುತ್ತಾರೆ. ತಂದೆಯ ಈ ನಡವಳಿಕೆಯಿಂದ ಅವಳಿಗೆ ತನ್ನ ತಾಯಿ ಹಾಗೂ ಇತರ ಬಂಧುಗಳ ವಿಚಾರ ಏನೂ ತಿಳಿಯುವುದಿಲ್ಲ. ಇವಳ ತಾಯಿಯ ನೆನಪಿಗಾಗಿ ಉಳಿದಿದ್ದ 'ಸೈಗಾಲ್' ಹಾಡಿನ ಗ್ರಾಮಫೋನ್ ರೆಕಾರ್ಡ್‌ಗಳನ್ನು ಬಿಟ್ಟರೆ ಮನೆಯಲ್ಲಿ ಮತ್ತೇನೂ ಇರುವುದಿಲ್ಲ. ತಾಯಿಯ ವ್ಯವಹಾರಗಳು ಮಗಳ ಗಮನಕ್ಕೆ ಬಾರದಂತೆ ತಂದೆ ವಾಮನರಾಯರು ಮಗಳನ್ನು ಬೆಳೆಸುತ್ತಾರೆ. ಕಾಲೇಜಿನಲ್ಲಿ ಓದುತ್ತಿದ್ದ ಭವಾನಿ ತನ್ನ ಅಧ್ಯಾಪಕನಾಗಿದ್ದ ಜಗನ್ನಾಥನನ್ನು ಪ್ರೀತಿಸುತ್ತಾಳೆ. ತಂದೆಗೆ ಮಗಳ ಆಯ್ಕೆ ಇಷ್ಟವಾಗದಿದ್ದರೂ ಕೊನೆಗೆ ಅವಳ ಅಪೇಕ್ಷೆಯಂತೆ ಜಗನ್ನಾಥನೊಡನೆ ಭವಾನಿಯ ಮದುವೆ ನಡೆಯುತ್ತದೆ. ಭವಾನಿಯ ತಾಯಿ ಕಾಲವಾದ ಮೇಲೆ ಅವಳಿಗೆ ತನ್ನ ತಾಯಿಯ ಚಾರಿತ್ರ್ಯದ ಬಗ್ಗೆ ತಿಳಿಯುತ್ತದೆ. ಭವಾನಿಯ ಅತ್ತೆ, ತನ್ನ ಸೊಸೆಯ ತಾಯಿ ನೀತಿ ಕೆಟ್ಟವಳೆಂದು ತಿಳಿದು ಸೊಸೆಯನ್ನು ದೂರುತ್ತಾಳೆ. ಹೆಂಡತಿಯ ಬಗ್ಗೆ ವಿಶ್ವಾಸ ಅನುಕಂಪದಿಂದಿದ್ದ ಜಗನ್ನಾಥ ತಾಯಿಯನ್ನು ಸಮಾಧಾನಪಡಿಸಲು ಹೆಂಡತಿಯನ್ನು ತವರಿಗೆ ಕಳುಹಿಸುತ್ತಾನೆ. ನಂತರ ಬೇರೆ ಮನೆ ಮಾಡಿ ಜಗನ್ನಾಥ ಭವಾನಿಯನ್ನು ಇರಿಸುತ್ತಾನೆ.

ಇದುವರೆವಿಗೂ ತ್ರಿವೇಣಿಯವರ ಕಾದಂಬರಿಗಳಲ್ಲಿನ ಸ್ತ್ರೀಪಾತ್ರಗಳ ಪರಿಚಯ ಮಾಡಿದ್ದೇನೆ. ಈಗಾಗಲೇ ತಿಳಿಸಿರುವಂತೆ ಅವರ ಕಾದಂಬರಿಗಳಲ್ಲಿ ಸ್ತ್ರೀಪಾತ್ರಗಳಿಗೆ ಹೆಚ್ಚಿನ ಪ್ರಾಮುಖ್ಯವಿದೆ. ಸ್ತ್ರೀಯರ ಬಹುಮುಖ ಸಮಸ್ಯೆಗಳನ್ನು ಸ್ತ್ರೀಯರ ದೃಷ್ಟಿಯಿಂದಲೇ ಕಾಣುವುದು ಅವರ ಬಹುಪಾಲು ಕಾದಂಬರಿಗಳ ಗುರಿ, ಸ್ತ್ರೀಪ್ರಧಾನ ಸ್ತ್ರೀಸಮಸ್ಯಾ ಪ್ರಧಾನವಾದ ಅವರ ಕತೆ, ಕಾದಂಬರಿಗಳಲ್ಲಿ ಬರುವ ಪಾತ್ರಗಳಲ್ಲಿ ಸ್ತ್ರೀಯರ ಪಾತ್ರಗಳ ಮುಂದೆ ಪುರುಷ ಪಾತ್ರಗಳು ಗೌಣವಾಗುತ್ತವೆ. ಆದರೂ ಕೆಲವು ಪುರುಷಪಾತ್ರಗಳು ಎಲ್ಲರ ಮೆಚ್ಚುಗೆಯನ್ನು ಪಡೆಯುತ್ತವೆ. 'ಅಪಸ್ವರ'ದ ಶಾಮು, 'ಹೃದಯಗೀತ'ದ ಮೂರ್ತಿ, 'ವಸಂತಗಾನ'ದ ವಾಸು, 'ಅಪಜಯ'ದ ಗೋಪಿನಾಥ, 'ಬೆಕ್ಕಿನಕಣ್ಣು'ವಿನ ರಾಜಶೇಖರ, 'ಮುಚ್ಚಿದ ಬಾಗಿಲು'ವಿನ ಡಾಕ್ಟರು, 'ದೂರದ ಬೆಟ್ಟ'ದ ಶ್ರೀಧರ, 'ಹಣ್ಣೆಲೆ ಚಿಗುರಿದಾಗ' ಕಾದಂಬರಿಯ ಪ್ರಸಾದ ಮುಂತಾದವರು, 'ಬೆಳ್ಳಿಮೋಡ'ದ ಮೋಹನ ಮತ್ತು 'ಶರಪಂಜರ'ದ ಸತೀಶ ತಮ್ಮ ಸ್ವಾರ್ಥಕ್ಕಾಗಿ, ತಮ್ಮ ತಪ್ಪಿಗಾಗಿ ನಂತರ ಪಶ್ಚಾತ್ತಾಪ ಪಡುತ್ತಾರೆ. 'ಕೀಲುಗೊಂಬೆ'ಯ ನರಸಿಂಹಯ್ಯ 'ಮೊದಲ ಹೆಜ್ಜೆ'ಯ ಶಿವಸ್ವಾಮಿ, 'ಸೋತು ಗೆದ್ದವಳು'ವಿನ

ಚಂದು ಇವರು ಕಾಮುಕರಂತೆ ಮೂಡಿಬಂದಿದ್ದಾರೆ. 'ಹಣ್ಣೆಲೆ ಚಿಗುರಿದಾಗ' ಕಾದಂಬರಿಯ ರಾಯರು ಮಾತ್ರ ನಮ್ಮ ನೆನಪಿನಲ್ಲಿ ಉಳಿಯಬಲ್ಲಂದತಹ ಜೀವಂತ ಪಾತ್ರ. ಇಷ್ಟನ್ನು ಬಿಟ್ಟರೆ ಉಳಿದ ಪುರುಷ ಪಾತ್ರಗಳು ವಿಶೇಷವಾಗಿ ಕಂಡುಬರುವುದಿಲ್ಲ.

'ಬೆಳ್ಳಿಮೋಡ'ದ ಇಂದಿರಾ, 'ತಾವರೆಕೊಳ'ದ ರತ್ನ, 'ಅಪಸ್ವರ'ದ ಪಾತ್ರಗಳ, 'ಶರಪಂಜರ'ದ ಕಾವೇರಿ, 'ಮೊದಲ ಹೆಜ್ಜೆ'ಯ ಕಥಾನಾಯಕಿ, 'ದೂರದ ಬೆಟ್ಟ'ದ ಸುನಂದ, 'ಹಣ್ಣೆಲೆ ಚಿಗುರಿದಾಗ' ಕಾದಂಬರಿಯ ಮಾಲತಿ, 'ಬೆಕ್ಕಿನ ಕಣ್ಣಿ'ನ ಕುಸುಮ, 'ಹೂವು ಹಣ್ಣಿನ' ರಮಾ ಇವು ಓದುಗರ ಅನುಕಂಪವನ್ನು ಪಡೆಯುವ ಪಾತ್ರಗಳು. ಇನ್ನುಳಿದ ಸ್ತ್ರೀಯರ ಸಾಧಾರಣ ಸರಳ ಪಾತ್ರಗಳು ಬಹುಪಾಲು ಸ್ತ್ರೀಪಾತ್ರಗಳು ತಮ್ಮದೇ ಆದ ವಿಶಿಷ್ಟತೆಯಿಂದ ಮಹತ್ವವಾಗುತ್ತವೆ. ಅದನ್ನು ಮುಂದಿನ ಅಧ್ಯಾಯದಲ್ಲಿ ನೋಡಬಹುದು.

ಅಧ್ಯಾಯ–೪

# ತ್ರಿವೇಣಿಯವರ ಸ್ತ್ರೀಪಾತ್ರಗಳ ವೈಶಿಷ್ಟ್ಯ

'ಹೆಣ್ಣು' ಸಮಾಜದ ನಿತ್ಯ ಬದುಕಿನಲ್ಲಿ ಅನೇಕ ಪಾತ್ರಗಳನ್ನು ನಿರ್ವಹಿಸುತ್ತಾಳೆ. ಆದರೆ ಪುರುಷಪರ ಸಮಾಜದಲ್ಲಿ ಹೆಣ್ಣಿನ ಸ್ಥಾನ, ಸಮಸ್ಯೆ ಅಭಿವ್ಯಕ್ತಿ, ಹಾಗೂ ಅವಳ ವ್ಯಕ್ತಿತ್ವವನ್ನು ಅವಜ್ಞೆಯಿಂದ ಕಾಣುತ್ತಿದ್ದ ಸಂದರ್ಭದಲ್ಲಿ ಆ ಹೆಣ್ಣನ್ನೇ ಕಾದಂಬರಿಯ ಮುಖ್ಯಪಾತ್ರವಾಗಿಸಿ ಅವಳ ಸಮಸ್ಯೆಗಳನ್ನೇ ಕಾದಂಬರಿಯ ವಸ್ತುವನ್ನಾಗಿಸಿಕೊಂಡು ಅವಳ ವ್ಯಕ್ತಿತ್ವಕ್ಕೆ ಗಟ್ಟಿತನವನ್ನು ತಂದುಕೊಟ್ಟವರಲ್ಲಿ ತ್ರಿವೇಣಿಯವರು ಪ್ರಮುಖರು. ಸಮಾಜದ ವಿವಿಧ ವರ್ಗಗಳ ಹೆಣ್ಣುಗಳ ಭಿನ್ನ ವ್ಯಕ್ತಿತ್ವದ ನೆಲೆಯ ಅವರ ಸಮಸ್ಯೆಗಳನ್ನು ಅನಾವರಣ ಮಾಡುವುದು ಇವರ ಮುಖ್ಯ ಕಾಳಜಿಯಾಗಿದೆ. ಕನ್ನಡದಲ್ಲಿ ಇವರಿಗೂ ಮೊದಲು ಹಿರಿಯ ಲೇಖಕಿಯರು ಹೆಣ್ಣನ್ನು ಕೇಂದ್ರವಾಗಿಸಿಕೊಂಡು ಕಾದಂಬರಿ ರಚಿಸಿದ್ದರೂ ಕೂಡ ಅವುಗಳಲ್ಲಿ ಹೆಣ್ಣಿನ ಬದುಕಿಗೆ ಅಡ್ಡಿಯಾಗಬಲ್ಲ ರೂಢಿಗತ ಮೌಲ್ಯಗಳನ್ನು ಪ್ರಶ್ನಿಸುವ ಅಗತ್ಯತೆ ವ್ಯಕ್ತವಾಗಿದೆಯೇ ಹೊರತು, ಅವಳ ಸಮಸ್ಯೆಗಳಿಗೆ ಪರಿಹಾರಗಳ ಸಾಧ್ಯತೆಗಳು ವ್ಯಕ್ತವಾಗಿಲ್ಲ. ಈ ಕಾದಂಬರಿಯ ನಾಯಕಿಯರು ಪ್ರಶ್ನಿಸಿದರೂ ಸೋಲಬೇಕಾದ ಅನಿವಾರ್ಯತೆ ವ್ಯಕ್ತವಾಗಿದೆ, ಅಲ್ಲದೆ ತ್ಯಾಗಮಯಿಗಳಾಗಿ ಕಂಡುಬರುತ್ತಾರೆ.

ಆದರೆ ತ್ರಿವೇಣಿಯವರ ಸ್ತ್ರೀಪಾತ್ರಗಳು ಸಮಸ್ಯೆಗಳ ಮಧ್ಯೆ ಸಂದರ್ಭದ ಸುಳಿಗೆ ಸಿಕ್ಕಿ ಮುಳುಗದೆ ಸೆಟೆದು ನಿಂತು ತಮ್ಮ ಅಸ್ತಿತ್ವವನ್ನು ಉಳಿಸಿಕೊಳ್ಳುತ್ತಾರೆ ಹಾಗೂ ವಿಭಿನ್ನ ಸಮಸ್ಯೆಗಳಿಗೆ ವಿಶಿಷ್ಟ ರೀತಿಯಲ್ಲಿ ಪರಿಹಾರ ಕಂಡುಕೊಳ್ಳುತ್ತಾರೆ. ಹೀಗೆ ಕೌಟುಂಬಿಕ ಚೌಕಟ್ಟಿನ ಒಳಗೆ ಮತ್ತು ಹೊರಗೆ ಸಮಸ್ಯೆಗಳನ್ನು ದಿಟ್ಟವಾಗಿ ನಿಭಾಯಿಸುವುದರ ಜೊತೆಗೆ ತಮ್ಮ ವೈಯಕ್ತಿಕ ಸಮಸ್ಯೆಗೆಗಳನ್ನು ಭಿನ್ನ ವ್ಯಕ್ತಿತ್ವದ ಮೂಲಕ ಬಿಡಿಸಿಕೊಳ್ಳುವಲ್ಲಿ ಅವರ ವೈಶಿಷ್ಟ್ಯ ಗೋಚರವಾಗುತ್ತದೆ. ತ್ರಿವೇಣಿಯವರ ಕಾದಂಬರಿಗಳ ಅನೇಕ ಪಾತ್ರಗಳು ತಮ್ಮ ವ್ಯಕ್ತಿತ್ವದ ಉಳಿವಿಗೆ ಹೋರಾಟ ನಡೆಸುತ್ತವೆ. ಪುರುಷಪರ ಸಮಾಜ ವ್ಯವಸ್ಥೆಯಲ್ಲಿ ಶೋಷಣೆಯ ಸುಳಿಗೆ ಸಿಕ್ಕಿ ಬದುಕಿನಲ್ಲಿ ಯಶಸ್ಸು ಕಾಣದೆ ನಲುಗಿ ಹೋಗುವ ಕೆಲವು ದುರಂತ ಸ್ತ್ರೀಪಾತ್ರಗಳು ಮುಂದಿನ ಪೀಳಿಗೆಗೆ ಎಚ್ಚರಿಕೆಯ ಸಂದೇಶ ಸಾರುತ್ತಾನೆ.

ತ್ರಿವೇಣಿಯವರ ಕಾದಂಬರಿಗಳಲ್ಲಿ ಬಹುಪಾಲು ನಾಯಕಿಯರು ಮಧ್ಯಮ ಹಾಗೂ ಮೇಲ್‌ಮಧ್ಯಮ ವರ್ಗದ ಹೆಣ್ಣುಮಕ್ಕಳು, ವಿವಾಹ ಸಂಬಂಧದಲ್ಲಿ ಎದುರಿಸಬೇಕಾದ ಜಿಜ್ಞಾಸೆ ಜೀವನ ಸಂಘರ್ಷದ ಮೂಲ

ನೆಲೆಗಳನ್ನು ಹುಡುಕುವ ಪ್ರಯತ್ನ ಮಾಡುತ್ತಾರೆ. ಹೆಣ್ಣಿನ ವಿವಾಹ, ವರದಕ್ಷಿಣೆ, ಲೈಂಗಿಕ ದಬ್ಬಾಳಿಕೆ, ಮಾನಸಿಕ ತೊಳಲಾಟ, ವೇಶ್ಯಾ ಸಮಸ್ಯೆ, ವಿಧವಾ ಸಮಸ್ಯೆ, ಸ್ತ್ರೀಸ್ವಾತಂತ್ರ್ಯ, ಶಿಕ್ಷಣ ಇತ್ಯಾದಿ ಸಮಸ್ಯೆಗಳನ್ನು ಎದುರಿಸುತ್ತಲೇ ಪರಿಹಾರವನ್ನು ಪ್ರಗತಿಶೀಲ ನೆಲೆಯಲ್ಲಿ ಕಂಡುಕೊಳ್ಳುವ ವಿಶಿಷ್ಟ ಹೆಣ್ಣುಪಾತ್ರಗಳು ತ್ರಿವೇಣಿಯವರಲ್ಲಿ ಮಾತ್ರ ಕಾಣಬಹುದು.

ಇವರ ಕಾದಂಬರಿಯ ಹೆಣ್ಣುಗಳು ತನ್ನ ಬದುಕಿನ ಬಗ್ಗೆ ತನ್ನನ್ನು ನಿಯಂತ್ರಣಕ್ಕೆ ಗುರಿಮಾಡಿರುವ ಈ ಸಮಾಜ ರಚನೆಯ ಬಗ್ಗೆ ಆಲೋಚಿಸುವ ರೀತಿ "ತನ್ನ ಬದುಕಿನ ಕೇಂದ್ರ ತಾನಲ್ಲದೆ ಬೇರೆ ಯಾರೋ ಆಗಿದ್ದಾರೆ. ಆ ಕೇಂದ್ರದ ಸುತ್ತ ತಾನು ತಿರುಗಬೇಕಾಗಿದೆ" ಎಂಬ ಸತ್ಯ ಅರಿತು ಸಾಂಪ್ರದಾಯಿಕ ಚೌಕಟ್ಟಿನಿಂದ ಹೊರಬಂದು ಪರ್ಯಾಯದಾರಿಗಳಿಗಾಗಿ ಶೋಧಕ್ಕೆ ತೊಡಗಿ ತಮ್ಮದೇ ಆದ ರೀತಿಯಲ್ಲಿ ನೆಲೆಗಳನ್ನು ಕಂಡುಕೊಳ್ಳುವ ವಿಶಿಷ್ಟ ವ್ಯಕ್ತಿತ್ವದ ಹೆಣ್ಣುಗಳು. ಇಂಥ ವ್ಯಕ್ತಿತ್ವ ತ್ರಿವೇಣಿಯವರ ಪಾತ್ರಗಳಲ್ಲಿ ಮಾತ್ರ ಕಾಣುವಂಥದ್ದು. ಆ ಹೆಣ್ಣಿಗಳ ವಿಶಿಷ್ಟ್ಯತೆಗಳನ್ನು ಈ ಮುಂದೆ ಕಾಣಬಹುದು.

'ವಿವಾಹ' ಹೆಣ್ಣಿನ ಜೀವನದ ಕೇಂದ್ರಬಿಂದು. ಅದರಲ್ಲಿ ಯಶಸ್ಸು ಸಾಧಿಸುವುದೇ ಅವಳ ಜೀವನದ ಗುರಿ. ಸಂಸಾರವೇ ಅವಳ ಜೀವನದ ಸರ್ವಸ್ವವಾಗಿರಬೇಕು ಎಂಬುದು ಸಂಪ್ರದಾಯಿಕವಾಗಿ ಹೆಣ್ಣನ್ನು ಕಾಣುವ ಸಾಮಾನ್ಯ ದೃಷ್ಟಿಗಿಂತ ಭಿನ್ನವಾದ ಹೆಣ್ಣಿನ ನೆಲೆಯನ್ನು ಇಲ್ಲಿ ಕಾಣಬಹುದು.

ಮದುವೆಯೊಂದೇ ಜೀವನದ ಸರ್ವಸ್ವವಲ್ಲ. ಆದರಿಂದಾಚೆಗೂ ಬದುಕಿನಲ್ಲಿ ಏನೋ ಅತೃಪ್ತಿ ಅಪಸ್ವರವಿದೆ ಎಂಬುದನ್ನು ತ್ರಿವೇಣಿಯವರ ಕೆಲವು ನಾಯಕಿಯರಲ್ಲಿ ಕಾಣಬಹುದು. ಇವರಲ್ಲಿ 'ಅಪಸ್ವರ' 'ಮೀರ' ಉತ್ತಮ ನಿದರ್ಶನ. ಕೌಟುಂಬಿಕ ವಲಯದಲ್ಲಿ ಅತೃಪ್ತಳಾಗಿ ಅದರಿಂದಾಚೆಗಿನ ಆಸಕ್ತಿಯನ್ನು ಬೆಳೆಸಿಕೊಳ್ಳಲು ಪ್ರಯತ್ನಿಸುತ್ತಾಳೆ ಮೀರಾ. ಸಮಾಜದಲ್ಲಿ ಹೆಣ್ಣು ಮೊದಲ ಆದ್ಯತೆ, ನಿಷ್ಠೆಗಳು ಕುಟುಂಬ, ಮಾತೃತ್ವದ ಕಡೆಗೆ ಕೊಡಬೇಕೆಂಬ ಅಪವಾದದಿಂದ ಮೀರ ತಪ್ಪಿಸಿಕೊಂಡು ವೈದ್ಯಳಾಗುವ ತನ್ನ ಆಸೆಯನ್ನು ಈಡೇರಿಸಿಕೊಂಡು ಸ್ವತಂತ್ರ್ಯ ಅಸ್ತಿತ್ವವನ್ನು ಪಡೆದುಕೊಳ್ಳುವ ದಿಕ್ಕಿನಲ್ಲಿ ಅವಳ ಆಲೋಚನೆಗಳು ಸಾಗುತ್ತವೆ.

ಕೌಟುಂಬಿಕ ವಲಯದಾಚೆಗಿನ ಬೌದ್ಧಿಕ ಆಸಕ್ತಿ, ಸ್ವತಂತ್ರ ವ್ಯಕ್ತಿತ್ವ, ವೃತ್ತಿಪರತೆಗಳನ್ನು ಪಡೆಯಲು ಇದ್ದ ವಿರೋಧ, ತಿರಸ್ಕಾರ, ತಡೆ, ಅಲಕ್ಷ್ಯಗಳನ್ನು ಮೀರಿ ಅವಳ ನಿರ್ಧಾರಗಳು ದೃಢವಾಗುತ್ತದೆ. ಪ್ರತಿಭಾವಂತೆ ಮೀರ ಕೇವಲ ನಾಲ್ಕು ಗೋಡೆಗಳ ಮಧ್ಯೆ ಸಹಧರ್ಮಿಣಿ ಗೃಹಿಣಿಯಾಗಿ ಜೀವನ ಸಾರ್ಥಕತೆ

ಕಂಡುಕೊಳ್ಳುವುದಕ್ಕಿಂತ ಭಿನ್ನವಾದ ಅಭಿಪ್ರಾಯಗಳನ್ನು ವ್ಯಕ್ತಪಡಿಸುತ್ತಾಳೆ. "ನಾನು ಯಾವ ಕೆಲಸವೂ ಇಲ್ಲದೆ ನಿಮ್ಮ ಸುಖವೇ ನನ್ನ ಸುಖ" ಎಂದು ತಿಳಿದು ಇಲ್ಲಿಯೇ ಇರಲಾರೆ, ಗಂಡನೇ ನನ್ನ ದೇವರು ಅವನ ಸುಖ ತನ್ನ ಸುಖ ಎಂದು ಭಾವಿಸುವ ಕಾಲ ಹೋಯಿತು. ಹೆಂಗಸು ತನ್ನ ಪತಿಗಿಂತಲೂ ತನ್ನ ವ್ಯಕ್ತಿತ್ವ ಅಭಿಪ್ರಾಯವನ್ನು ಪ್ರೀತಿಸುತ್ತಾಳೆ" ಎಂಬ ಮೀರಾಳ ಬಾಯಿಂದ ಬರುವ ಮಾತುಗಳು ಮುಂದೆ ಆಗಲಿರುವ ಪ್ರಗತಿಪರ ಬದಲಾವಣೆಯ ಮುನ್ಸೂಚನೆಯ ಮಾದರಿಯ ಹೆಣ್ಣಾಗಿ ಕಂಡುಬರುತ್ತಾಳೆ. ಮೀರಾ ಮುಖ್ಯ ಆಸಕ್ತಿ ಸ್ವತಂತ್ರ್ಯ ವ್ಯಕ್ತಿತ್ವ ಪಡೆಯುವುದರ! ಬಗ್ಗೆ ವ್ಯಕ್ತವಾಗುತ್ತದೆ. ಕೌಟುಂಬಿಕ ಸುಖಕ್ಕೆ ಬದಲಾಗಿ ವೃತ್ತಿಯಲ್ಲಿ ಸಾಫಲ್ಯ, ತೃಪ್ತಿ, ಸಮಾಧಾನ ಕಂಡುಕೊಳ್ಳುವ ಮೀರಾ ವಿಶಿಷ್ಟ ವ್ಯಕ್ತಿತ್ವದ ಹೆಣ್ಣಾಗಿ ಕಂಡುಬರುತ್ತಾಳೆ.

ಸ್ತ್ರೀಗೆ ಶಿಕ್ಷಣ ಅಗತ್ಯವಿಲ್ಲ. ಅವಳು ಪತಿ, ಮಕ್ಕಳನ್ನು ಸರಿಯಾಗಿ ನೋಡಿಕೊಂಡು ಸಂಸಾರವನ್ನು ಸುಗಮವಾಗಿ ನಡೆಸುವುದನ್ನು ಕಲಿತರೆ ಸಾಕು ಎಂಬ ಸಾಮಾಜಿಕ ವಾತಾವರಣದಲ್ಲಿ ಮೀರ ವಿವಾಹದ ನಂತರವು ತನ್ನ ವಿದ್ಯಾಭ್ಯಾಸವನ್ನು ಮುಂದುವರೆಸುವುದು, ಅವಳು ಗಂಡನಿಂದ ದೂರವಿದ್ದು ವೈದ್ಯಕೀಯ ವಿದ್ಯಾಭ್ಯಾಸ ಮಾಡುವುದು, ಸಾಂಪ್ರದಾಯಿಕ ಹೆಣ್ಣು ಮನಸ್ಸುಗಳಾದ ಅವಳ ದೊಡ್ಡಮ್ಮ ಹಾಗೂ ವೆಂಕಮ್ಮನಲ್ಲಿ, ಮೀರಾಳ ನಿರ್ಧಾರ ಅಸಂಬಂಧ, ಅತಿರೇಕವೆನಿಸಿದರು ಮೀರ ತನ್ನ ವೈಯಕ್ತಿಕ ಅಭಿಪ್ರಾಯಗಳನ್ನು ಸಮರ್ಥವಾಗಿ ಪ್ರತಿಪಾದಿಸಿಕೊಳ್ಳುತ್ತಾಳೆ.

ಹೆಣ್ಣು ಗಂಡನ ಆಸಕ್ತಿ, ಅಭಿರುಚಿ, ಅಭಿಪ್ರಾಯಗಳಿಗೆ ಮನ್ನಣೆ ನೀಡಿ ಅವುಗಳನ್ನು ತನ್ನದೆಂದು ಭಾವಿಸಿ ಅದಕ್ಕೆ ಪೂರಕವಾಗಿ ತನ್ನ ಸ್ವಭಾವಗಳನ್ನು ಹೊಂದಿಸಿಕೊಂಡು ನಡೆಯಬೇಕು ಎಂಬ ಅಭಿಪ್ರಾಯಗಳಿಗೆ ಮೀರ ವ್ಯತಿರಿಕ್ತವಾಗಿ ತನ್ನದೇ ಆದ ವಿಶಿಷ್ಟ ನಿಲುವುಗಳನ್ನು ವ್ಯಕ್ತಪಡಿಸುತ್ತಾಳೆ. ಗಂಡಿಗೆ ಹೇಗೆ ತನ್ನದೇ ಆದ ಆಸಕ್ತಿ, ಅಭಿರುಚಿಗಳಿವೆಯೋ ಹಾಗೆಯೇ ಹೆಣ್ಣಿಗೂ ತನ್ನದೇ ಆದ ವೈಯಕ್ತಿಕ ಆಸಕ್ತಿ, ಅಭಿರುಚಿಗಳಿವೆ ಅವುಗಳನ್ನು ಪೋಷಿಸಲು ತನ್ನದೇ ಆದ ವೈಯಕ್ತಿಕ ನಿಲುವುಗಳನ್ನು ವ್ಯಕ್ತಪಡಿಸುತ್ತಾಳೆ. ಹಳ್ಳಿಯ ಅವಿದ್ಯಾವಂತನಾದ ಶಾಮುವಿಗೆ ಮೀರ ತಾಸುಗಟ್ಟಲೆ ಮೀರ ಪುಸ್ತಕಗಳಲ್ಲಿ ಹುದುಗಿರುವುದು ಕಂಡು ಅಸಮಾಧಾನ ವ್ಯಕ್ತಪಡಿಸುತ್ತಾನೆ. "ಮಹರಾಯ್ತಿ, ಅದೆಷ್ಟು ಪುಸ್ತಕಗಳನ್ನು ಓದುತ್ತೀಯಾ? ಜೀವವಿಲ್ಲದ ಪುಸ್ತಕಗಳಲ್ಲಿ ನಿನಗೇನು ಆಕರ್ಷಣೆಯೋ?"

ಮೀರಳ ಸಹನೆ ಮೀರಿತು.

"ಹಗಲಿರುಳೂ ಗದ್ದೆ, ತೋಟ, ಭೂಮಿ ಅಂತ ಓಡಾಡುತ್ತೀರಲ್ಲ, ನಿಮಗೆ ಅದು ಬೇಜಾರಾಗೋದಿಲ್ವೇ" ಎಂದಳು ಶಾಮು ಹುಬ್ಬು ಗಂಟಿಕ್ಕಿ

"ನಾವು ಪ್ರತಿದಿನ ನೋಡುವ ಸೂರ್ಯನಲ್ಲಿ ಬೇಜಾರು ಬರುವುದೇ? ಭೂಮಿತಾಯಿಯ ಪವಿತ್ರ ಸ್ನೇಹದಲ್ಲಿ ನನ್ನ ಮನಸ್ಸು ಐಕ್ಯವಾಗಿದೆ. ತಾಯಿಯ ಮೇಲೆ ಬೇಜಾರು ಮಾಡಿಕೊಂಡ ಕಂದನಿರುವನೇ? ಅವಳ ಸೌಂದರ್ಯ ನಿತ್ಯನೂತನ, ಅವಳ ಸ್ನೇಹ ಅಮರ, ಅವಳ ಸೇವೆಯಲ್ಲಿ ಅಡಗಿರುವ ತೃಪ್ತಿ ನಿಮ್ಮ ಪುಸ್ತಕದಿಂದ ಬರುವುದೇನು? ಎಂದು.

"ನಿಮಗೆ ಭೂಮಿಯ ಸಹವಾಸ ಹೇಗೆ ನಿತ್ಯ ನೂತನವೋ ನನಗೆ ಪುಸ್ತಕಗಳಿಂದ ದೊರಕುವ ಶಾಂತಿ ಅಪರಮಿತ, ನೀವು ಸಾಹಿತ್ಯದಲ್ಲಿ ಹೇಗೆ ಯಾವ ಸೌಂದರ್ಯವನ್ನೂ ಕಾಣಲಾರಿರೋ ಹಾಗೆ ನಾನು ಭೂದೇವಿಯಲ್ಲಿ ಯಾವ ಚೆಲುವನ್ನೂ ಕಾಣಲಾರೆ, ನನಗೆ ಊಟ, ನಿದ್ದೆಗಿಂತಲೂ ಪುಸ್ತಕದ ಅವಶ್ಯಕತೆ ಹೆಚ್ಚಾಗಿದೆ. ಹೊಟ್ಟೆಯ ಹಸಿವು ಹಿಂಗಿಸಲು ಅನ್ನ ಬೇಕಾಗುವಂತೆ ಹೃದಯದ ಹಸಿವು ನೀಗಿಸಲು ನನಗೆ ಪುಸ್ತಕ ಬೇಕು" (ಪು.೧೦೪).

ಇಲ್ಲಿ ಮೀರಾಳನ್ನು ಪತಿಯ ಮನ್ನಣೆಗಾಗಿ ತನ್ನ ಸ್ವಂತ ಅಭಿರುಚಿಯನ್ನು ಬಿಡಲು ಸಾಧ್ಯವಿಲ್ಲ ಎಂಬುದು ವ್ಯಕ್ತವಾಗುತ್ತದೆ.

ಹೆಣ್ಣಿನ ಆತ್ಮಸಂವೇದನೆ ಹೆಣ್ಣು ಮಾತ್ರ ಅರ್ಥಮಾಡಿಕೊಳ್ಳಲು ಸಾಧ್ಯ. ಇಲ್ಲಿ ಪುರುಷ ಈ ಕಥೆಯನ್ನು ಬರೆಯುತ್ತಿದ್ದರೆ ಈ ಆತ್ಮಸಂವೇದನೆಯ ಸೂಕ್ಷ್ಮ ಹೊರಗೆಳೆಯಲು ಸಾಧ್ಯವಾಗುತ್ತಿತ್ತೋ ಇಲ್ಲವೊ ಆದರೆ ತ್ರಿವೇಣಿಯವರು ಹೆಣ್ಣಾದ್ದರಿಂದ ಈ ಸಂವೇದನೆ ಭಾವಾವೇಷವಿಲ್ಲದೆ ಸಹಜವಾಗಿ ಮೀರಾಳ ಮೂಲಕ ವ್ಯಕ್ತವಾಗಿದೆ.

ಗಂಡಿನ ದೃಷ್ಟಿಯಲ್ಲಿ ಹೆಣ್ಣೆಂದರೆ ತಾಯಿಯಾಗುವುದಕ್ಕಾಗಿಯೇ ಜನ್ಮತಾಳಿರುವವಳು ಮತ್ತು ಅವಳು ಬದುಕಿನುದ್ದಕ್ಕೂ ತಾಯ್ತನಕ್ಕಾಗಿ ಹಾಗೂ ಮಕ್ಕಳಿಗಾಗಿ ಹಂಬಲಿಸುತ್ತಾಳೆ. ಸ್ತ್ರೀಯೆಂದರೆ ಒಂದು ಅಕ್ಷಯ, ಗರ್ಭಕೋಶ ಫಲಶಕ್ತಿಯ ದೇವತೆ ಎಂಬ ಭಾವನೆ ವ್ಯಕ್ತವಾಗುತ್ತದೆ. ಆದರೆ ಇದಕ್ಕೆ ವಿರುದ್ಧವಾಗಿ, ಆಧುನಿಕ ಹೆಣ್ಣು ಇಂತಹ ಆದಿಮ ಪ್ರತೀಕಾತ್ಮಕ ಧೋರಣೆಗಳನ್ನು ಹೊರಲು ಸಿದ್ಧಳಿಲ್ಲ ಎಂಬ ಅಭಿಪ್ರಾಯ ಮೀರಾಳಲ್ಲಿ ಈ ಕೆಳಗಿನ ಮಾತುಗಳ ಮೂಲಕ ವ್ಯಕ್ತವಾಗಿದೆ.

ತನ್ನ ಪತಿಯು ಆರು ಹೆಣ್ಣು ಮಕ್ಕಳು ಮತ್ತು ಮೂವರು ಗಂಡು ಮಕ್ಕಳನ್ನು ಇಚ್ಛಿಸುವಾಗ ಮೀರಾ ಹೀಗೆ ಉದ್ಗರಿಸುತ್ತಾಳೆ.

"ಮಕ್ಕಳೇನು ಆಕಾಶದಿಂದ ಉದುರುತ್ತವೆ ಅಂತ ಭಾವಿಸಿದೀರೇನು? ಗಂಡಸರಿಗೆ ಮಗುವಿನ ಬೆಲೆ ತಿಳಿದಿದೆಯೇನು? ಒಂಬತ್ತು ತಿಂಗಳು ಹೊತ್ತು ಹೆರುವುದು ಸಾಮಾನ್ಯವೇ? ಒಂದು ಮಗುವಿಗಾಗಿ ಹೆಣ್ಣು ತನ್ನ ರಕ್ತಮಾಂಸವನ್ನು ಹಂಚಬೇಕು. ಕೆಲವು ಬಾರಿ ತನ್ನ ಪ್ರಾಣವನ್ನೇ ಪಣವಾಗಿಡಬೇಕಾದ ಸಂದರ್ಭವೂ ಬರುತ್ತವೆ. ತಮ್ಮ ಅಲ್ಪ ಪಾತ್ರವನ್ನು ಮುಗಿಸಿ ಪ್ರತಿಯೊಂದು ಜವಾಬ್ದಾರಿಯೂ ಹೆಣ್ಣಿನ ಮೇಲಿದ್ದರೂ ಕರುಣೆಯಿಲ್ಲದ ರಕ್ಕಸನಂತೆ ವರ್ತಿಸುತ್ತಾನೆ ಗಂಡು. ಒಂಬತ್ತು ಮಕ್ಕಳನ್ನು ಹೆರುವುದರಲ್ಲಿ ನನ್ನ ಸಮಾಧಿ ಸಿದ್ಧವಾದಂತೆಯೇ ಸರಿ" (ಪು.೧೬೪).

ಶಾಮುವಿಗೆ ಮೀರಳ ಈ ಪ್ರತಿಕ್ರಿಯೆ ಆಶ್ಚರ್ಯವಾಗುವುದು ಹೆಣ್ಣಿನ ಅಂತಸತ್ವವನ್ನು ಅರಿಯುವ ಸಾಮರ್ಥ್ಯ ಗಂಡಿಗಿಲ್ಲವೆಂಬುದು ವ್ಯಕ್ತವಾಗುತ್ತ್ದೆ. "ಪ್ರಸವವೇದನೆಯ ಭಯಾನಕ ಅನುಬವ ಕೊಂಚವಾದರೂ ಪುರುಷರಿಗಿದ್ದರೆ" ಎಂದು ಮೀರಾ ನಿಟ್ಟುಸಿರು ಬಿಡುತ್ತಾಳೆ.

ಕೌಟುಂಬಿಕ ಜೀವನದಲ್ಲಿ ವಿಫಲಳಾಗಿ ವೈದ್ಯಳಾಗುವ ಹಂಬಲ ಮತ್ತೆ ಮರುಕಳಿಸಿದ ಸಂದರ್ಭದಲ್ಲಿ ಮೀರ ತನ್ನ ವೈಯಕ್ತಿಕ ಆಸೆಗೆ ಮಾತ್ರ ಬೆಲೆ ಕೊಡದೆ ತನ್ನಂತೆಯೇ ವಿವಾಹ ಜೀವನದಲ್ಲಿ ತನ್ನದೇ ಆದ ರಿತಿಯಲ್ಲಿ ಘಾಸಿಗೊಳಗಾಗಿದ್ದ ಗಂಡನಿಗೆ ಹೀಗೆ ಆಲೋಚಿಸುತ್ತಾಳೆ. ತನ್ನಿಂದ ಗಂಡನ ಜೀವನ ಹಾಳಾಯಿತು ಎಂದವಳಿಗೆ ಭಾಸವಾಗುತ್ತಿತ್ತು. ಒಬ್ಬರ ಕೈ ಒಬ್ಬರು ಹಿಡಿದು ಇಬ್ಬರ ಬದುಕೂ ವ್ಯರ್ಥವಾಗಿತ್ತು. ಸಾಮರಸ್ಯವಿಲ್ಲದ ಸಂಸಾರ ಇಬ್ಬರನ್ನೂ ಬಲಿ ತೆಗೆದುಕೊಂಡಿತ್ತು" ಇದರಿಂದ ಸಾಮರಸ್ಯವಿಲ್ಲದೆ ಜೀವನ ಅಪಸ್ವರವಾಗುತ್ತದೆ. ಇದಕ್ಕೆ ಗಂಡನನ್ನು ವಂಚಿತನಾಗದಂತೆ ಹಳ್ಳಿಯ ಪರಿಸರಕ್ಕೆ ಹೊಂದಿಕೊಳ್ಳುವ ಹೆಣ್ಣೊಬ್ಬಳೊಂದಿಗೆ ವಿವಾಹ ಮಾಡುವುದು ಅವಳ ನಿಸ್ವಾರ್ಥಕ್ಕೆ ನಿದರ್ಶನವಾಗುತ್ತದೆ.

ಈ ಮಧ್ಯೆ ಯಾವ ವಿಚಾರದಲ್ಲೂ ಹೊಂದಾಣಿಕೆಯಾಗದ ಸ್ವಭಾವಗಳ ಮಧ್ಯೆ ಮೀರಾ ತನ್ನ ಭವಿಷ್ಯವನ್ನು ತಾನೇ ಶೋಧಿಸಿಕೊಳ್ಳಲು ನಿರ್ಧರಿಸುವುದು ದುಡುಕಿನ ಆಲೋಚನೆ ಎನಿಸದೆ ಅರ್ಥಪೂರ್ಣವೆನಿಸುತ್ತದೆ.

ಹೆಣ್ಣಾಗಲಿ, ಗಂಡಾಗಲಿ ಸಂಸಾರದಲ್ಲಿ ಎಲ್ಲರೂ ಯಶಸ್ವಿಯಾಗುವುದಿಲ್ಲ. ಇದು ಸರ್ವತಂತ್ರಿಕ. ಸಂಸಾರ ಒಡೆಯುವ ಶಕ್ತಿಯೇ 'ಅಪಸ್ವರ'. ಈ ಶಕ್ತಿಯು ಬಂದಲ್ಲ ಒಂದು ಕಾರಣದಿಂದ ಉದ್ಭವವಾಗುತ್ತದೆ. ಸಾಮರಸ್ಯವಿಲ್ಲದ ಸಂಸಾರದಲ್ಲಿ ಅಪಸ್ವರ ತಲೆದೋರುತ್ತದೆ. ದಾಂಪತ್ಯ ಜೀವನ ಮೀರಾಳ ಪಾಲಿಗೆ ಅಪಸ್ವರವಾಗುತ್ತದೆ. ಹೆಣ್ಣಿಗೆ ತಾಯ್ತನ ಬಹುಮುಖ್ಯ.

ಪ್ರಕೃತಿದತ್ತವಾದ ಪ್ರೀತಿ, ಮಮತೆ, ಮೋಹ, ಮಮಕಾರ ಇವು ಗಂಡ–ಹೆಂಡ, ಮಕ್ಕಳು, ನೆಂಟರು, ಇಷ್ಟರು, ಸ್ನೇಹಿತರು ಎಂಬ ಎಲ್ಲರನ್ನೂ ರಕ್ತಸಂಬಂಧದ ಅರ್ಥದಲ್ಲಿ ಬೆಸೆಯುತ್ತದೆ, ಒಂದುಗೂಡಿಸುತ್ತದೆ. ಎಲ್ಲಿ ತಾಯ್ತನಕ್ಕೆ ಆಘಾತವಾಗುತ್ತದೆಯೇ ಅಲ್ಲಿ ರಕ್ತ ಸಂಬಂಧವು ಕಡಿದುಹೋಗಲೂಬಹುದು ಎಂಬುದು ಇಲ್ಲಿ ಮೀರಳಲ್ಲಿ ಸಮರ್ಥಿಸಬಹುದು. ವಿವಾಹ ಜೀವನದಲ್ಲಿ ಕಾಣದ ಸುಖ ಸಂತೋಷಗಳನ್ನು ತನ್ನ ವೃತ್ತಿ ಜೀವನದಲ್ಲಿ ಕಂಡುಕೊಳ್ಳಲು ಪ್ರಯತ್ನಿಸುವುದರಲ್ಲಿ ಯಾವ ತಪ್ಪು ಇಲ್ಲ ಎಂಬುದು ಮೀರಾಳ ಮೂಲಕ ವ್ಯಕ್ತವಾಗಿ ಸಾಮಾನ್ಯ ಸಮಸ್ಯೆಗೆ ಭಿನ್ನ ರೀತಿಯಲ್ಲಿ ಪರಿಹಾರ ಕಂಡುಕೊಳ್ಳುವುದರಲ್ಲಿ ಮೀರಾಳ ವೈಶಿಷ್ಟ್ಯ ವ್ಯಕ್ತವಾಗಿದೆ.

"ಲೈಂಗಿಕ ಪಾವಿತ್ರ್ಯವೇ ಹೆಣ್ಣಿನ ಬದುಕಿನ ಮಾನದಂಡವಲ್ಲ" ಎಂಬುದನ್ನು ಅನೇಕ ನಾಯಕಿಯರ ಪಾತ್ರಗಳಲ್ಲಿ ನಿರೂಪಿತವಾಗಿದೆ. ಅದಕ್ಕೆ ಒಂದು ನಿದರ್ಶನ 'ಹೂವು–ಹಣ್ಣು' ಕಾದಂಬರಿಯ ನಾಯಕಿ ರಮಾ. ಸಮಾಜದ ವಿಕೃತ ರೂಪಗಳಲ್ಲೊಂದಾದ ವೇಶ್ಯಾ ಸಮಸ್ಯೆಯನ್ನು ರಮಾಳ ಮೂಲಕ ಮಾನವೀಯ ದೃಷ್ಟಿಕೋನದಿಂದ ಚಿತ್ರತಳಾಗಿದ್ದರೆ, ಅನಾಥಳೂ, ಅಸಹಾಯಕಳೂ ಆದ ಹೆಣ್ಣನ್ನು ಮಾನವಾಗಿ ಬದುಕಲು ಬಿಡದೆ ಸ್ವಾರ್ಥ, ಅವಳನ್ನು ಹೀನಾಯವಾಗಿ ಕಂಡು ಅವಳ ಬದುಕನ್ನು ದುರಂತವಾಗಲು ಸಮಾಜ ಹೊಣೆಯಾಗಿರುವುದನ್ನು ಪ್ರತಿಪಾದಿಸಿದ್ದಾರೆ.

"ವೇಶ್ಯಾವೃತ್ತಿಯನ್ನು ಇಲ್ಲಿ ಹೀನವಾಗಿ ಕಾಣದೆ ಹೆಣ್ಣಿನ ಬದುಕಿನ ಅಸಾಯಕತೆಯ ಸಂದರ್ಭದಲ್ಲಿ ಅನಿವಾರ್ಯವಾಗುತ್ತದೆ." ರಮಾಳಿಗೆ ತನ್ನ ಮಗಳ ಉಳಿವಿಗಾಗಿ ತನ್ನ ಅಸ್ತಿತ್ವವನ್ನು ಕಳೆದುಕೊಳ್ಳುವ ಹೆಣ್ಣು ರಮಾ ಇದು ಪ್ರಕೃತಿ ಧರ್ಮದ ಉದಾಹರಣೆಯ ಮೂಲಕ ಸಮರ್ಥಿಸಲಾಗಿದೆ. ಹೂವಿನಿಂದ ಹಣ್ಣು ದೊರಕುತ್ತದೆ. ಆದರ್ ಎಹೂವಿನ ಹಂತದಲ್ಲಿ ಹಣ್ಣು ವಿಖಾಸವಾಗತೊಡಗಿದ ಮೇಲೆ ಅದರ ಸಂಬಂಧವೇ ಬೇರೆಯಾಗುತ್ತದೆ ಅಥವಾ ಹೆಣ್ಣು ತನ್ನ ಬದುಕನ್ನು ಸಾರ್ಥಕಪಡಿಸಿಕೊಳ್ಳಲು ಸ್ವತಂತ್ರವಾಗುತ್ತದೆ. ಹೂವಿನಿಂದಲೇ ಹಣ್ಣು ಬಂದಿದ್ದ್ರೂ ತನ್ನ ದೋಷದ ಪರಿಣಾಮ ಹೆಣ್ಣಿನ ಮೇಲಾಗಬಾರದೆಂದು ಹೂವು

ಹಣ್ಣಿನಿಂದ ದೂರ ಸರಿಯುತ್ತದೆ. ಬದುಕಿನಲ್ಲಿ ತಾಯಿ ಮತ್ತು ಮಗಳ ಸಂಬಂಧವನ್ನು ವಿಚಾರ ಮಾಡುವಾಗ ತ್ರಿವೇಣಿಯವರು ಪ್ರಕೃತಿ ಧರ್ಮವನ್ನು ನೆನಪಿಗೆ ತರುತ್ತಾರೆ. ಈ ಉದಾಹರಣೆಯ ಮೂಲಕ ಸನ್ನಿವೇಶವನ್ನು ಗ್ರಹಿಸಿದರೆ ಮಗಳು ತನ್ನ ತಾಯಿಯನ್ನು ತಿರಸ್ಕರಿಸುವ ವಿಚಾರದಲ್ಲಿ ತಾಯಿಯನ್ನಾಗಲೀ ಮಗಳನ್ನಾಗಲೀ ದೂಷಿಸಲು ಸಾಧ್ಯವಾಗುವುದಿಲ್ಲ.

ಮಗಳನ್ನು ಸಾಕಲು ಅವಳ ಸುಂದರ ಭವಿಷ್ಯಕ್ಕಾಗಿ ಬೇರೆ ದಾರಿ ಕಾಣದ ರಮಾ ವೇಶ್ಯೆಯಾಗುತ್ತಾಳೆ. ಆದರೆ ತಾಯಿ–ಮಗಳ! ಸಂಬಂಧವನ್ನು ಕಡಿದುಹಾಕುವುದು ಅವಳ ವೇಶ್ಯಾವೃತ್ತಿಯೇ ಕಾರಣಕ್ಕಾಗಿಯೇ ಮಗಳಿಂದ ದೂರವಾಗಬೇಕಾದ ರಮಾಳ ಸ್ಥಿತಿ, ವೇದನೆ, ಒಂಟಿತನ, ಇವೆಲ್ಲವೂ ಒಂದು ಹೆಣ್ಣು ತನ್ನ ಕರುಳಿನ ಕುಡಿಗಾಗಿ ತನ್ನ ಅಸ್ಥಿತ್ವವನ್ನು ಕಳೆದುಕೊಂಡು ತ್ಯಾಗಮಯಿ ತಾಯಿ ರಮಾ.

ಇಲ್ಲಿ ರಮಾ ಒಬ್ಬ ತಾಯಿಯಾಗಿ ಉದಾತ್ತವಾಗಿ ಚಿತ್ರಿತಳಾಗಿದ್ದಾಳೆ. ಆದರೆ ವೇಶ್ಯಾವೃತ್ತಿಯಲ್ಲಿ ಒಂದು ಸರಳ ವ್ಯಕ್ತಿತ್ವದವಳಾಗಿ ಕಂಡುಬರುತ್ತಾಳೆ. ಒಂದು ರೀತಿಯ ಕೃತಕವೆನ್ನುವಂತೆ ಗೋಚರವಾಗುತ್ತದೆ. ಇದಕ್ಕೆ ಕಾರಣ ತ್ರಿವೇಣಿಯವರಿಗೆ ವೇಶ್ಯಾವೃತ್ತಿ ಹಾಗೂ ಅವರ ಮಾನಸಿಕ ಪ್ರವೃತ್ತಿಯ ಬಗ್ಗೆ ನೈಜ ಪರಿಚಯವಿಲ್ಲದಿರುವುದು ಕಾರಣವಿರಬಹುದು. ಇದಕ್ಕೆ ಒಂದು ನಿದರ್ಶನದ ಅಂಶವನ್ನು ತ್ರಿವೇಣಿಯವರ ಪತಿ ಶಂಕರ್ ಅವರೇ ಒಂದು ಸಂದರ್ಭದಲ್ಲಿ ಹೇಳುತ್ತಾರೆ. "ಒಂದು ತಮಾಷೆಯಾಯ್ತು, ಅವರು ಒಬ್ಬ ವೇಶ್ಯೆಯನ್ನೂ ಬೇಟಿಯಾಗದೇ 'ಹೂವು–ಹಣ್ಣು' ಕಾದಂಬರಿ ಬರೆದಿದ್ರು. ಈ ವಿಷಯ ನನಗ್ಗೊತ್ತಿತ್ತು. ಒಂದ್ಸಲ ನಾನು ಆಕೆ ಮಾರ್ಕೆಟ್‌ಗೆ ಹೋಗಿದ್ವಿ. ನಾನು ಒಬ್ಬಾಕೆಯನ್ನು ತೋರಿಸಿ ನೋಡು ಆಕೆ ವೇಶ್ಯೆ! ಅಂತ ಹೇಳ್ದೆ, ಆದ್ರೆ ಆಕೆ ಅದನ್ನು ನಂಬಲೇ ಇಲ್ಲ. ಹೌದಾ, ಅವರು ಹೀಗಿರ್ತಾರಾ? ಅಂತ ಹುಬ್ಬೇರಿಸಿದ್ರು!

ರಮಾ ತಿಳಿದ ಸಾಮಾನ್ಯ ಅನುಭವದಿಂದ ಮೂಡಿಬಂದ ವ್ಯಕ್ತಿತ್ವದವಳಾಗಿ ತ್ರಿವೇಣಿಯರಲ್ಲಿ ಕಂಡುಬರುತ್ತಾಳೆ. ಈ ಪಾತ್ರದಲ್ಲಿ ಅಂತಹ ವೈಶಿಷ್ಟ್ಯವೇನು ಕಂಡುಬರದಿದ್ದರೂ ಪಾತ್ರ ವೈವಿಧ್ಯತೆಗೆ ರಮಾ ವಿಶೇಷವಾದ ದುರಂತ ಪಾತ್ರದವಳಾಗಿದ್ದಾಳೆ.

ವಿವಾಹಪೂರ್ವ ಹಾಗೂ ವಿವಾಹೇತರ ಸಂಬಂಧಗಳ ಬಗ್ಗೆ ಸಮಾಜ ಹೆಣ್ಣಿಗೆ ಮಾತ್ರ ಹೊರಿಸಿರುವ ನೈತಿಕ ವಿಧಿ, ನಿಷೇಧಗಳನ್ನು ತ್ರಿವೇಣಿ ತಮ್ಮ ಕೆಲವು ನಾಯಕಿಯರ ಮೂಲಕ ಪ್ರಶ್ನಿಸಿದ್ದಾರೆ. ಈ ಗೆರೆಗಳನ್ನು ದಾಟಿಯ ಸ್ತ್ರೀಯರನ್ನು ಸಮಾಜ ಕ್ರೂರವಾಗಿ ನಡೆಸಿಕೊಳ್ಳುವುದನ್ನೂ ಅಂಥ ನಡವಳಿಕೆಗಳು ಅಕ್ಷಮ್ಯ ಎಂಬ

ಘೋರಣೆಯನ್ನು ತ್ರಿವೇಣಿ ಖಂಡಿಸುತ್ತಾರೆ. ಮನೋವಿಶ್ಲೇಷಣಾ ಶಾಸ್ತ್ರದ ಪರಿಚಯ ಮತ್ತು ಪ್ರಗತಿಶೀಲ ಸ್ವಭಾವದಿಂದ ಇವರಲ್ಲಿ ಈ ಉದಾರವಾಗಿ ಮನೋಭಾವ ಬಂದಿರಬಹುದು. ಇವರ ಈ ಮನೋಭಾವ ವಿವಾಹಪೂರ್ವ ಅಥವಾ ವಿವಾಹೇತರ ಸಂಬಂಧಗಳನ್ನು ಸಮರ್ಥಿಸುವ ಉದ್ದೇಶವಲ್ಲ. ಸಮಾಜ ಹಾಕಿದ ನೈತಿಕತೆಗಳನ್ನು ಯಾವುದೋ ಸಂದರ್ಭದಲ್ಲಿ ದಾಟಿದಳು ಎಂಬುದರ ಹಿನ್ನೆಲೆಯನ್ನು ಲಕ್ಷಕ್ಕೆ ತೆಗೆದುಕೊಳ್ಳದೆ ಸಾರಾಸಗಟಾಗಿ ಖಂಡಿಸುವ ಸಂಪ್ರದಾಯಬದ್ಧ ದ್ವಿಸ್ತರ ನ್ಯಾಯ ಪದ್ಧತಿಯ ವಿರೋಧವನ್ನು ವ್ಯಕ್ತಪಡಿಸುತ್ತಾರೆ. ದುರಂತದ ಹಿಂದಿನ ಸೀಮೋಲ್ಲಂಘನೆ. ಸೀಮೋಲ್ಲಂಘನದ ಹಿಂದಿರುವ ಒತ್ತಡಗಳು, ಆ ಒತ್ತಡಗಳನ್ನು ರೂಪಿಸುವ ಸಾಮಾಜಿಕ, ಕೌಟುಂಬಿಕ ಹಿನ್ನೆಲೆ ಸಂದರ್ಭಗಳು ಅರಿವಿಗೆ ಬರಬೇಕು. ಅನೇಕ ನಾಯಕಿಯರ ಮೂಲಕ ವ್ಯಕ್ತಪಡಿಸಿದ್ದಾರೆ. ಅದಕ್ಕೆ ನಿದರ್ಶನ ಮೊದಲ ಹೆಜ್ಜೆಯ ನಾಯಕಿ (ತಾಯಿ, ಅಕ್ಟೋಬರ್ ೮೨, ಪು.೨೬).

ಕಾದಂಬರಿಯಲ್ಲಿ ನಾಯಕಿಯೂ ಹೆಸರಿಲ್ಲದ ಅನಾಮಧೇಯಳಾಗಿಯೇ ಉಳಿಯುವುದರಲ್ಲಿಯೂ ಒಂದು ಅರ್ಥವನ್ನು ಕಂಡುಕೊಳ್ಳಬಹುದು. ನಮ್ಮ ಸಮಾಜದಲ್ಲಿ ಸೌಂದರ್ಯ ಮತ್ತು ಹಣ ಇವೆರಡರಲ್ಲಿ ಒಂದಾದರೂ ಇರದಿದ್ದರೆ ಹೆಣ್ಣಿಗೆ ತನ್ನದೇ ಆದ ಒಂದು ವ್ಯಕ್ತಿತ್ವವಿಲ್ಲ. ತನ್ನ ಅನನ್ಯತೆಯ ಕಲ್ಪನೆಯೂ ಬರಲು ಸಾಧ್ಯವಿಲ್ಲವೆಂಬ ನಿಷ್ಠುರ ಸತ್ಯವನ್ನು ಕಾಣಬಹುದು.

ಇಲ್ಲಿ ನಾವು ನಿರೀಕ್ಷಿಸುವಂತೆಯೇ ಈ ದುರ್ದೈವಿ 'ಪಾಪಿ'ಯ ಕಥೆಯ ಮೂಲಕ ಲೇಖಕಿ ಬಡವರ ಬಗ್ಗೆ ಅನುಕಂಪವನ್ನು ಮೂಡಿಸುವುದರೊಡನೆಯೇ ಸ್ತ್ರೀಯನ್ನು ನಿರ್ದಯೆಯಿಂದ ನೋಡುವ ಸಮಾಜವನ್ನೂ ವಿರೋಧಿಸುತ್ತಾರೆ. ನಾಯಕಿಯ ದುಸ್ಥಿತಿಗೆ ಬಡತನವು ಒಂದು ಕಾರಣ. ಬಡತನವು ಮಾನವ ಸಂಬಂಧವನ್ನು ಹೇಗೆ ಪ್ರಭಾವಿಸುತ್ತದೆ ಎಂಬುದನ್ನು ಅವಳಿಂದಲೇ ನಿರೂಪಿಸಲ್ಪಟ್ಟಿದೆ. ಬಡತನದ ಶ್ರೇಷ್ಠತೆಯ ಜೊತೆಗೆ ಅದರ ಘೋರ ಪರಿಣಾಮವೆನೆಂಬುದು ಸೂಕ್ಷ್ಮವಾಗಿ ವ್ಯಕ್ತಪಡಿಸಿದ್ದಾರೆ. ಅದು ಮನುಷ್ಯರನ್ನು ಅಮಾನವೀಯರನ್ನಾಗಿ ಮಾಡಿ ಆಪ್ತ ಮಾನವ ಸಂಬಂಧಗಳನ್ನೂ ತುಚ್ಛವಾಗಿಸುತ್ತದೆ. ಇಲ್ಲಿ ನಾಯಕಿಯ ಅಜ್ಜನಿಗೆ ಅವಳ ತಾಯಿಯನ್ನು ಕಂಡರೆ ಏನೂ ಗೌರವ, ಪ್ರೀತಿ ಇರಲಿಲ್ಲ. ಏಕೆಂದರೆ ಅವಳ ತಾಯಿ ತುಂಬಾ ಬಡವಿ. ಆದರೆ ಅದೇ ಅಜ್ಜನಿಗೆ ತನ್ನ ಎರಡನೆಯ ಮಗಳೆಂದರೆ ಅಪಾರ ಪ್ರೇಮ ಕಾರಣ ಅವಳು ಶ್ರೀಮಂತಳು ಹಾಗೆಯೇ ನಾಯಕಿ ಹುಟ್ಟಿದಾಗ ಇವಳ ತಂದೆ-ತಾಯಿಯರಿಗೆ ಏನೂ ಸಂತೋಷವಾಗುವುದಿಲ್ಲ. ಇಂಥ ವಿಷಮ ಪರಿಸ್ಥಿತಿಯಲ್ಲಿ

ಹುಟ್ಟಿದ ನಾಯಕಿಯ ದುಸ್ಥಿತಿಗೆ ಅವಳ ಕೌಟುಂಬಿಕ ಹಿನ್ನೆಲೆ, ಬೆಳೆದ ರೀತಿಯು ಅವಳು ಹೀಗಿನ ದುಡುಕಿಗೆ ಹಿನ್ನೆಲೆಯಾಗುತ್ತದೆ.

ತನ್ನ ಕುಟುಂಬದ ಸ್ಥಿತಿಯನ್ನು ಅವಳೇ ಹೇಳಿಕೊಳ್ಳುವಂತೆ ದಿನದಿನಕ್ಕೆ ಬೆಳೆದ ಸಂಸಾರ, ಬಡತನ, ಅನಾರೋಗ್ಯದಿಂದಾಗಿ ಸುಬ್ಬಿಯಲ್ಲಿ ದಿನದಿನಕ್ಕೆ ಅಸಹನೆ, ಸಿಡುಕು ಹೆಚ್ಚಾಯಿತು. ಆಕೆ ತನ್ನ ಬೇರಾರ ಮೇಲೂ ತೋರಿಸುವಂತಿರಲಿಲ್ಲ. ಅವಳ ಆಗ್ರಹಕ್ಕೆ ಸುಲಭವಾಗಿ ಬಲಿಯಾದವಳು ನಾನು ಸುಬ್ಬಿಗೆ ಕೆಲಸ ಕೈಲಿ ಹರಿಯುತ್ತಿರಲಿಲ್ಲ. ಆದರೂ ನಾನು ಮಾಡಿದ ಕೆಲಸಗಳಲ್ಲಿ ಏನಾದರೊಂದು ತಪ್ಪು ತೆಗೆದು ನನ್ನ ಮೇಲೆ ರೇಗುತ್ತಿದ್ದಳು" (ಪು.೫೭).

ಹೆಣ್ಣು-ಗಂಡು ಎಂಬ ದ್ವಿಸ್ತರ ಪಕ್ಷಪಾತ ಧೋರಣೆಯು ಇವಳ ದುಸ್ಥಿತಿಗೆ ಕಾರಣವಾಗಿರುವ ಹಿನ್ನೆಲೆಯನ್ನು ಬಹಳ ಸೂಕ್ಷ್ಮವಾಗಿ ಗುರುತಿಸಿದ್ದಾರೆ. ಅವಳನ್ನು ಸ್ಕೂಲಿನಿಂದ ಬಿಡಿಸಿದರೂ ಕೂಡ ಅವಳ ತಮ್ಮನಿಗೆ, ಅವನು ಮುಂದೆ ಕುಟುಂಬದ ಜವಾಬ್ದಾರಿ ಯನ್ನು ಹೊರುತ್ತಾನೆಂಬ ನಂಬಿಕೆಯಿಂದ ಹೇಗಾದರೂ ತನ್ನ ಶಿಕ್ಷಣವನ್ನು ಮುಂದುವರಿಸಲು ಪ್ರೋತ್ಸಾಹ ಸಿಗುತ್ತದೆ. ಅವಳ ತಾಯಿಯೂ ಕೂಡ, ಅಪ್ರಜ್ಞಾಪೂರ್ವಕವಾಗಿ ಮತ್ತು ತಾನು ಬೆಳೆದು ಬಂದ ವಾತಾವರಣದಿಂದಾಗಿ, ಆಹಾರ ಬಟ್ಟೆಬರೆಗಳ ವಿಷಯದಲ್ಲಿ ಮಗಳ ಹಾಗೂ ಮಗನ ಮಧ್ಯೆ ಪಕ್ಷಪಾತ ಮಾಡುತ್ತಾಳೆ. ಸಾಧಾರಣವಾಗಿ ಮನೆಯಲ್ಲಿ ಸಾಕಷ್ಟು ಆಹಾರ ಯಾವತ್ತೂ ಇಲ್ಲ. ಆದರೆ ಇರುವ ಅಲ್ಪಸ್ವಲ್ಪವನ್ನು ಮೊದಲು ಮಗನಿಗೆ ಕೊಟ್ಟು, ಇನ್ನೂ ಏನಾದರೂ ಉಳಿದರೆ ಮಾತ್ರ ಅದು ಮಗಳಿಗೆ ಸಿಕ್ಕುತ್ತದೆ.

"ನನ್ನ ತಮ್ಮ ಗುರುರಾಜ ಹುಟ್ಟಿದ ಮೇಲೆ ನನ್ನ ಎರಡು ವರ್ಷದ ಬದುಕು ಒಮ್ಮಿಂದೊಮ್ಮೆಗೆ ಬದಲಾಯಿಸಿತು. ಈ ಬಗೆಯ ಬದಲಾವಣೆಯನ್ನು ನಾನು ಕನಸಿನಲ್ಲಿಯೂ ನಿರೀಕ್ಷಿಸಿರಲಿಲ್ಲ.

ನಾನು ಹುಟ್ಟಿದಾಗ ಹೆಣ್ಣಾಯಿತೆಂದು ನಿರಾಶೆಗೊಂಡಿದ್ದ ಸುಬ್ಬಿ, ಅಪ್ಪ ಗುರುವಿನ ಜನನದಿಂದ ಹರ್ಷಿತರಾಗಿದ್ದರು. ಸುಬ್ಬಿ ತಾನು ಮೊದಲೇ ಮನಸ್ಸಿನಲ್ಲಿ ಮಾಡಿಕೊಂಡಿದ್ದಂತೆ ಗುರುಗಳ ಹೆಸರನ್ನು ಮಗನಿಗಿರಿಸಿದ್ದಳು. ಮೊದಲು ಮನೆಯಲ್ಲಿ ನನಗಿದ್ದ ಸ್ಥಾನ ನಿಧಾನವಾಗಿ ಹಿಂದಕ್ಕೆ ಸರಿಯಿತು. ಈಗ ಪ್ರತಿಯೊಂದು ಗುರುವಿಗೆ ಮೊದಲಾಗಬೇಕು. ಅವನದಾಗಿ ಉಳಿದ ನಂತರ ನನ್ನದಾಗಬೇಕು.

ಈಗ ನಾನು ಮೊದಲಿನಂತೆ ಸುಬ್ಬಿಯ ತೊಡೆಯ ಮೇಲೆ ತಲೆಯಿಟ್ಟು ಮಲಗುವುವಾಗುತ್ತಿರಲಿಲ್ಲ. ನಾನು ಒಂದು ಗಳಿಗೆ ಮಲಗುವುದರಲ್ಲಿ ಗುರು ಎದ್ದು ಬಿಡುತ್ತಿದ್ದ. "ಏಳು ಆ ಕಡೆ ಮಲಗಿಕೋ ಗುರು ಎದ್ದು ಬಿಟ್ಟ" ಎನ್ನುತ್ತಾ ಸುಬ್ಬಿ ನನ್ನ ತಲೆಯನ್ನು ಕೆಳಕ್ಕೆ ಸರಿಸಿ ಗುರುವನ್ನು ತೊಡೆಯ ಮೇಲೆ ಮಲಗಿಸಿಕೊಳ್ಳುತ್ತಿದ್ದಳು. ಆಗ ನನಗೆ ಗುರುವಿನ ಮೇಲೆ ತುಂಬಾ ಕೋಪ ಬರುತ್ತಿತ್ತು."

ಈ ರೀತಿಯ ತಾರತಮ್ಯದ ಕೌಟುಂಬಿಕ ವಾತಾವರಣದಲ್ಲಿ ವಿದ್ಯೆ ಪ್ರೀತಿ ವಾತ್ಸಲ್ಯಗಳಿಂದ ವಂಚಿತಳಾಗಿ ಬದುಕಿನ, ಭವಿಷ್ಯದ ನೆಲೆ ಕಾಣದೆ ಹತಾಶಳಾಗಿರುತ್ತಾಳೆ. "ವರ್ಗಾಧಾರಿತ, ಲಿಂಗಾಧಾರಿತ ಶ್ರೇಣಿಕೃತ ಬುಡದಲ್ಲಿ ತೀರ ಕೆಳಕ್ಕೆ ಸಿಕ್ಕಿಕೊಂಡ ಹೆಣ್ಣು ಸಹಜ ಬದುಕಿನ ಸುಖಗಳಿಗೆ ಹಂಬಲಿಸಿಸುತ್ತಾಳೆ. ಆದರೆ ಹೆಣ್ಣಾಗಿ, ಕಪ್ಪಾಗಿ, ಬಡವಳಾಗಿ ಬಾಲ್ಯದಿಂದಲೂ ಅವಳು ಎದುರಿಸಿದ ಹತಾಶೆ, ಉಂಡ ನೋವು, ಸಹಿಸದ ಅಪಮಾನದ ಸ್ಥಿತಿಯಲ್ಲಿ ಅವಳಲ್ಲಿದ್ದ ಕಾಮನೆಗಳನ್ನು ಹರಿಯಲು ದಿಕ್ಕಿಲ್ಲದೆ ಕಂಡ ಹುಲ್ಲುಕಡ್ಡಿಯನ್ನೇ ನಂಬಿ ಹತ್ತಲು ಹೋಗಿ ಜಾರಿದಳು.

ಮದುವೆಗೆ ಮುಂಚೆ ಕಾಮುಕನ ಮೋಸಕ್ಕೆ ಬಲಿಯಾಗಿ ದುಡುಕಿರುವುದು ಸತ್ಯವಾದರೂ ಆ ದುಡುಕಿಗೆ ಅವಳ ಕೌಟುಂಬಿಕ ಹಿನ್ನೆಲೆ ಸಂದರ್ಭಕ ಒತ್ತಡಗಳು ಅವಳದಲ್ಲಿದೆ. ಸಹಜ ಕಾಮನೆಗಳು ಈ ಸಂದರ್ಭದಲ್ಲಿ ಯೌವನಕ್ಕೆ ಕಾಲಿಟ್ಟಿರುವ ಯುವತಿ ಮದುವೆಯಾಗದ ಹೆಣ್ಣಿನ ಆಂತರಿಕ ಹಂಬಲಗಳನ್ನು ಇಷ್ಟ ಸೂಕ್ಷ್ಮವಾಗಿ ನೈಜವಾಗಿ ಹೊರಗೆಡವಿರುವುದು ಇವರ ಸಂವೇದನೆಯ ವೈಶಿಷ್ಟವೇ ಎನ್ನಬಹುದು. ಅದಕ್ಕೆ ನಿದರ್ಶನ ಈ ಮಾತುಗಳು,

"ಮಣಿಯ ಮದುವೆಯಾದ ನಂತರ ನನ್ನ ಹೃದಯದಲ್ಲಿ ನಿದ್ರಿಸುತ್ತಿದ್ದ ರಾಗ ಭಾವೋದ್ವೇಗಗಳೆಲ್ಲಾ ಒಂದೇ ಬಾರಿಗೆ ಜಾಗೃತಗೊಂಡವು. ಮಗುವಾಗಿದ್ದವಳು ಒಂದೇ ದಿನದಲ್ಲಿ ಯುವತಿಯಾದೆ. ಮಣಿ, ಮೂರ್ತಿಯ ಕಣ್ಣುಗಳ ಸಮಾಗಮ, ಮೂಕಸಂದೇಶ ಕಳ್ಳನೋಟಗಳು ಪರಸ್ಪರ ನಗೆಯಲ್ಲಿಡಗಿದ್ದ ಪ್ರಣಯ ಇವುಗಳನ್ನು ನಾನು ಗಮನಿಸಿದ್ದೆ. ಮೂರ್ತಿಯ ಕಣ್ಣುಗಳು ಪ್ರಣಯದ ಸಂದೇಶ ಹೊತ್ತು ಮಣಿಯಲ್ಲಿ ನಾಟಿದಾಗ ನನ್ನೆದೆ ಭಾರವಾಗಿತ್ತು. ಧಾರೆಗೆ ಮುಂಚೆ ಮಣಿ ಎದುರಿಗೆ ಕುಳಿತಿದ್ದ ನನ್ನ ಮುಖದಲ್ಲಿ ಎದುರಿಗಿಲ್ಲದ ತನ್ನ ನಲ್ಲನ ಮುಖ ಚಿತ್ರಿಸಿಕೊಂಡು ತನ್ಮಯಳಾದಾಗ ನಾನು ಈ ಹುಚ್ಚು ಉಂಟೆ ಎಂದು ಚಕಿತಳಾಗಿದ್ದೆ.

ಆದರೆ "ನನ್ನ ಹೃದಯದಲ್ಲಿ ಯೌವನದ ಸಂಚಾರವಾಗಿತ್ತು, ಯಾವುದೋ ಒಂದು ಮಧುರ ಯಾತನೆಯಿಂದ ನನ್ನ ಹೃದಯ ಮಿಡಿಯುತ್ತಿತ್ತು. ದಿನದಿನಕ್ಕೆ ನನ್ನ ಅನ್ಯಮನಸ್ಕತೆ, ಕೆಲಸ ಕಾರ್ಯಗಳಲ್ಲಿ ನಿರಾಸಕ್ತಿ, ಹಗಲುಗನಸು ಕಾಣುವಿಕೆ ಜಾಸ್ತಿಯಾಯಿತು.

". . . ಆದರೆ ಈ ಬಗೆಯ ಹುಚ್ಚಿಲ್ಲದಿದ್ದರೆ, ಒಂದು ಮಧುರ ಪುಳಕವಿಲ್ಲದಿದ್ದರೆ ಬಾಳು ಎಷ್ಟೊಂದು ಶೂನ್ಯ ಎಂದು ನನಗೆ ಈಗ ಅನಿಸತೊಡಗಿತ್ತು. ಕೋಗಿಲೆ ಕೂಗಿದಾಗ, ಹೂವು ಅರಳಿದಾಗ, ಪೂರ್ಣಿಮೆಯ ಚಂದ್ರ ನೀಲಿಯಾಗಸದಲ್ಲಿ ಮುಖ ತೋರಿದಾಗ, ಮಂದ ಮಾರುತ ಸುಮ ಸೌರಭ ಹೊತ್ತು ನನ್ನಡೆಗೆ ತೇಲಿಬಂದಾಗ, ನನ್ನ ಬಾಳಿನ ಶೂನ್ಯತೆ ಇಮ್ಮಡಿಯಾಗುತ್ತಿತ್ತು".

"ನನಗೆ ಬಿಡುಗಡೆ ಬೇಕಿತ್ತು ಪ್ರಣಯಬಂಧನದೊಳಗೆ ಹಾರುವ ಬಿಡುಗಡೆ, ಪ್ರೇಮದ ಬಲೆಯಲ್ಲಿ ಬೀಳಲು ಪ್ರಣಯದ ಹುಚ್ಚು ಮಾತುಗಳನ್ನು ಕೇಳಲು ನಾನು ಬಿಡುಗಡೆಯನ್ನು ಬಯಸಿದೆ. ನನ್ನ ಹೃದಯದಲ್ಲಿ ಹರಿಯುತ್ತಿರುವ ಹುಚ್ಚು ಹೊಳೆ ಶಾಂತವಾಗುವುದು ಎಂದಿಗೆ? ನನ್ನ ಹೃದಯವನ್ನು ದಹಿಸಿ ಭಸ್ಮ ಮಾಡುತ್ತಿರುವ ಜ್ವಾಲಾಮುಖಿ ತಣ್ಣಗಾಗುವುದೆಂದಿಗೆ?

"ನಾನು ಎಲ್ಲರಂತೆ ಬಾಳಲು ಬಯಸಿದೆ. . . ನಾನೊಂದು ಹೆಜ್ಜೆ ಮುಂದಿಟ್ಟೆ. . . ಆದರೆ ಮೊದಲ ಹೆಜ್ಜೆಯ ಪರಿಣಾಮ?"

"ನನ್ನ ಬದುಕಿಗೊಂದು ರೂಪ ಕೊಡಲು ನನ್ನ ತಾಯಿತಂದೆ ಪ್ರಯತ್ನಿಸಿ ವಿಫಲರಾಗಿದ್ದರು. ಮದುವೆಯ ಸಂತೆಯಲ್ಲಿ ಕಪ್ಪು ತೊಗಲಿನ ನನ್ನ ಶರೀರಕ್ಕೆ ಬೆಲೆ ಕಟ್ಟುವವರು ಯಾರು ಇರಲಿಲ್ಲ."

"ನನ್ನ ಆತುರದ ಕಣ್ಣುಗಳಿಗೆ ಕಾಮಿಯೇ ಪ್ರೇಮಿಯಾಗಿ ಕಂಡಿದ್ದೆ ನನ್ನ ಬಾಳನ್ನು ನಾನೇ ರೂಪಿಸಿಕೊಳ್ಳಲು ಅಳುಕುತ್ತಾ ನಾನೊಂದು ಹೆಜ್ಜೆಯಿಟ್ಟು ತಪ್ಪಿ, ಎಡವಿ ಮುಗ್ಗರಿಸಿ ಎಚ್ಚರಗೊಂಡಾಗ, ನನ್ನ ಸುತ್ತಲೂ ಜೈಲಿನ ಬಿಗಿಯಾದ ಗೋಡೆಗಳಿದ್ದವು. ಈ ಗೂಡಿನೊಳಗೆ ನನ್ನನ್ನು ತಳ್ಳಲು ಬಹುಮಟ್ಟಿಗೆ ಕಾರಣನಾದವನು ಕಬ್ಬಿಣದ ಸರಳುಗಳಾಚೆ ಸ್ವತಂತ್ರನಾಗಿ ಓಡಾಡುತ್ತಿದ್ದ."

ಈ ರೀತಿ ಹೆಣ್ಣಿನ ದುಸ್ಥಿತಿಗೆ ಸಮರ್ಥವಾದ ಸಕಾರಣಗಳು ಅಲ್ಲಿನ ಹೆಣ್ಣೇ ಕೊನೆಯಲ್ಲಿ ಕಂಡುಕೊಳ್ಳುವುದರ ಮೂಲಕ ಈ ಹೆಣ್ಣು ವಿಶಿಷ್ಟವಾಗುತ್ತಾಳೆ. ಇಲ್ಲಿ ವಿವಾಹಪೂರ್ವದ ಒಂದು ಸಂಬಂಧಕೇಂದ್ರದಲ್ಲಿ ನಾಯಕಿಯ ಪೂರ್ವಾಪರ ಆಲೋಚನೆ ಇಲ್ಲದೆ ದುಡುಕಿದಳು ಎಂಬುದು ಸತ್ಯವಾದರೂ

ಇಲ್ಲಿ ಪ್ರಮುಖವಾದ ಕಾಳಜಿ ಅವಳ ದುಡುಕಿಗೆ ಹಿನ್ನೆಲೆಯನ್ನು ಪರಿಗಣಿಸುವುದು ಮುಖ್ಯವಾಗುತ್ತದೆ. ಈ ನಾಯಕಿಯು ಕೊಡುವ ಸಕಾರಣದಲ್ಲಿ ನಮ್ಮ ಸಾಮಾಜಿಕ ಹಾಗೂ ಕೌಟುಂಬಿಕ ವ್ಯವಸ್ಥೆಯಲ್ಲಿ ಹೆಣ್ಣನ್ನು ಬೆಳೆಸುವ ಕಾಣುವ ರೀತಿಯಲ್ಲಿಯೇ ತಪ್ಪಿದೆ. "ಅವಳು ಸಮರ್ಥವಾಗಿ ಸಮಸ್ಯೆಯನ್ನು ಎದುರಿಸುವ ವಾತಾವರಣ ನಮ್ಮಲ್ಲಿ ನಿರ್ಮಾಣವಾಗಿಲ್ಲ. ಅದಕ್ಕೆ ಅವಕಾಶ ಕಲ್ಪಿಸಿಕೊಟ್ಟಿದ್ದರೆ ಹೆಣ್ಣು ಮೊದಲ ಹೆಜ್ಜೆಯಲ್ಲೇ ಎಡುವುತ್ತಿರಲಿಲ್ಲ" ಎಂಬ ವ್ಯವಸ್ಥೆಯ ಬಗ್ಗೆ ವಿಷಾದ ಮೂಡುತ್ತದೆ.

ಗಂಡು-ಹೆಣ್ಣಿನ ವಿವಾಹೇತರ ಸಂಬಂಧದ ನೆಲೆಯಲ್ಲಿ ಕೆಲವು ಹೆಣ್ಣುಗಳನ್ನು ಕಾಣಬಹುದು. ಅದಕ್ಕೆ ಉತ್ತಮ ನಿದರ್ಶನ ತಾವರೆಕೊಳದಲ್ಲಿ 'ರತ್ನ'. ದಾಂಪತ್ಯ ಜೀವನದಲ್ಲಿ ಭಾವನೆಗಳಿಲ್ಲದ ವ್ಯವಹಾರಿಕ ಮನಸ್ಸಿನ ಗಂಡನೊಡನೆ ಯಾಂತ್ರಿಕ ಜೀವನದಲ್ಲಿ ಬರಡುತನ ಶುಷ್ಕತೆಯನ್ನು ಅನುಭವಿಸಿ ಭಾವುಕನಾದ ಪರಪುರುಷ ರಮೇಶನಲ್ಲಿ ಮನಸ್ಸನ್ನು ಹರಿಯಬಿಟ್ಟರು ಬದುಕಿನಲ್ಲಿ ಜಾರದೆ ಗಟ್ಟಿಯಾಗಿ ನಿಲ್ಲುತ್ತಾಳೆ.

"ಹೆಣ್ಣಿನ ಉದ್ಧಾರ ಗಂಡಿನಿಂದಲೆ ಎಂಬ ಪೂರ್ವಸಿದ್ಧಾಂತ ನಿಲುವಿಗೆ ರತ್ನ ಇಲ್ಲಿ ವ್ಯತಿರಿಕ್ತ", ವಿಶಿಷ್ಟ ಹೆಣ್ಣಾಗಿ ನಿಲ್ಲುತ್ತಾಳೆ. ರಮೇಶನ ಮುಗ್ಧ ಭಾವನೆಗಳಿಗೆ ರತ್ನ ಮನಸೋತದ್ದು ನಿಜವಾದರೂ ಅದರಿಂದ ಬದುಕನ್ನು ದುರಂತವಾಗಿಸಿಕೊಳ್ಳದೆ ಅವನನ್ನು ಉಳಿಸುತ್ತಾಳೆ. ಇಲ್ಲಿ "ಒಂದು ಗಂಡಿನ ಉದ್ಧಾರ ಹೆಣ್ಣಿಂದ" ಹಾಗುತ್ತದೆ. ಅತಿಥಿಯಾಗಿ ಬಂದ ರಮೇಶನನ್ನು ಆತ್ಮೀಯತೆಯಿಂದ, ಉಪಚಾರದಿಂದ ನೋಡಿಕೊಳ್ಳುತ್ತಾಳೆ. ಬದುಕಿನಲ್ಲಿ ಆಸಕ್ತಿ ಕಳೆದುಕೊಂಡಿದ್ದ ರಮೇಶನ ಬಾಳನ್ನು ಹಸನಾಗಿ ಮಾಡಿ ಅವನಲ್ಲಿ ಹೊಸ ಹುರುಪು, ಚೈತನ್ಯ ತುಂಬುವ ಪ್ರಯತ್ನವನ್ನು ರತ್ನ ಮಾಡುತ್ತಾಳೆ. ಸ್ವಭಾವತಃ ಸ್ನೇಹಜೀವಿಯೂ, ಭಾವಜೀವಿಯೂ ಆಗಿದ್ದ ರತ್ನಳಲ್ಲಿ ರಮೇಶ ಅನುರಕ್ತನಾಗುತ್ತಾನೆ. ರಮೇಶನಲ್ಲಿ ಅವಳೂ ಕೂಡ ಅನುರಕ್ತಳಾದರೂ ಅವನ ಅತಿಯಾದ ಭಾವುಕತೆಯನ್ನು ನಿಯಂತ್ರಿಸುತ್ತಾಳೆ. "ನಮ್ಮ ಮನಸ್ಸು ಬಂಡೆಯಂತಿರಬೇಕು. ಅಲೆಗಳು ಎಷ್ಟೇ ಬಂದರೂ, ಜೋರಿನಿಂದ ಬಂಡೆಗೆ ಬಡಿದರೂ ಅದು ಪುಡಿಯಾಗುವುದಿಲ್ಲ" ಎಂದು ರತ್ನ ದುರ್ಬಲ ಮನಸ್ಸಿನ ರಮೇಶನಿಗೆ ಧೈರ್ಯ, ಆತ್ಮವಿಶ್ವಾಸವನ್ನು ತುಂಬುತ್ತಾಳೆ. ತನ್ನ ಹೃದಯದಲ್ಲಾಗುತ್ತಿದ್ದ ತುಮುಲವನ್ನು ಹತ್ತಿಕ್ಕಿ ತನ್ನಿಂದ ರಮೇಶನ ಬಾಳು ಹಾಳಾಗಬಾರದೆಂದು ಅವನು ಮೊದಲಿನಂತಾಗೆ ವೈದ್ಯಕೀಯ ವಿದ್ಯಾಭ್ಯಾಸ ಮುಂದುವರೆಸಿ ವೈದ್ಯವೃತ್ತಿಯಲ್ಲಿ ತೊಡಗಬೇಕು ಎಂದು ಬಯಸುತ್ತಾಳೆ. ರತ್ನ ಮನಸ್ಸು ಮಾಡಿದ್ದರೆ ರಮೇಶನ ಬಾಳನ್ನು ಕ್ಷಣದಲ್ಲಿ ಹಾಳು ಮಾಡಬಹುದಾಗಿತ್ತು. ಆದರೆ ಅವಳ ಪ್ರೀತಿ ಅಷ್ಟು ಕೀಳುಮಟ್ಟದ್ದಲ್ಲ. ರತ್ನ ಬುದ್ಧಿವಂತಿಕೆಯಿಂದ, ವಿವೇಚನೆಯಿಂದ "ಕೆಸರಿನಾಳಕ್ಕೆ ಇಳಿಯುತ್ತಿದ್ದ ರಮೇಶನನ್ನು ಉಳಿಸುತ್ತಾಳೆ." ಎಂಥ

ದುರ್ಬಲ ಸಂದರ್ಭವಲ್ಲೂ ಜಾರದ, ಅವಳ ಮನಸ್ಸಿನ ಸಂಯಮ ಕಳೆದುಕೊಳ್ಳುವ ಅವಳ ಗಟ್ಟಿ ವ್ಯಕ್ತಿತ್ವ ನಿಜಕ್ಕೂ ವೈಶಿಷ್ಟಪೂರ್ಣವಾಗಿದೆ.

ಅವಳು ಸಮಸ್ಯೆಗಳನ್ನು ನಿಭಾಯಿಸುವ ರೀತಿ, ಅಂತರಂಗದ ಭಾವನೆಗಳನ್ನು ವಿಶ್ಲೇಷಿಸುವ ವಿಧಾನ, ಜೀವನದಲ್ಲಿ ಪ್ರೀತಿ, ಪ್ರೇಮ, ಸಂಸಾರ, ಗಂಡ, ಮಕ್ಕಳು ಸ್ನೇಹಿತರು ಮೊದಲಾದ ಸಂಬಂಧಗಳಿಗೆ ಯಾವುದಕ್ಕೆ ಯಾರಿಗೆ ಯಾವ ಸ್ಥಾನ ಕೊಡಬೇಕು. ಸಮಸ್ಯೆಗಳನ್ನು ಹೇಗೆ ನಿಭಾಯಿಸಬೇಕು ಹೊಂದಾಣಿಕೆಯ ಅಗತ್ಯ ಮೊದಲಾದವುದನ್ನು ಅರ್ಥಮಾಡಿಕೊಂಡು ಅದನ್ನು ರಮೇಶನಂಥ ಭಾವುಕ ಮನಸ್ಸಿನವನಿಗೆ ಸರಿಯಾಗಿ ಅರ್ಥಮಾಡಿಸುತ್ತಾಳೆ ಮತ್ತು ಅವನನ್ನು ಕರ್ತವ್ಯಮುಖವಾಗಿ ತನ್ನ ಗುರಿ ಸಾಧಿಸಲು ಉತ್ತೇಜಿಸುತ್ತಾಳೆ ಹೆಣ್ಣೆಂದರೆ ಅಳುಮುಂಜಿ, ಅಬಲೆ, ಸ್ವತಂತ್ರ ವಿಚಾರ ಸಾಮರ್ಥ್ಯವಿಲ್ಲದವಳು ಎಂಬ ರೂಢಿಗತ ಕಲ್ಪನೆಯನ್ನು ರತ್ನಳ ಪಾತ್ರ ಬದಲಾಯಿಸಿಬಿಡುತ್ತಾಳೆ. ಇಷ್ಟಾಗಿಯೂ ಇಲ್ಲಿ ಗಮನಿಸಬೇಕಾದ್ದೇನೆಂದರೆ, ಭಾವುಕತೆ ಮತ್ತು ವೈಚಾರಿಕತೆ. ತರ್ಕ, ವ್ಯವಹಾರಪ್ರಜ್ಞೆ ಇವೆಲ್ಲವುಗಳ ಬದುಕಿನಲ್ಲಿ ಸ್ಥಾನವಿರಬೇಕು ಎಂಬುದನ್ನು ಪ್ರತಿಪಾದಿಸುವ ತ್ರಿವೇಣಿಯವರ ಸಮತೂಕದ ದೃಷ್ಟಿಯನ್ನು ತಮ್ಮ ಸ್ತ್ರೀಪಾತ್ರಗಳ ಮೂಲಕ ಸ್ಥಾಪಿಸಿದ್ದಾರೆ.

ಮದುವೆಯ ನಂತರದಲ್ಲಿಯೂ ಜೀವನದಲ್ಲಿ ಯಾವುದೋ ಅತೃಪ್ತಿಯಿದೆ ಎಂಬುದಕ್ಕೆ ಮತ್ತೊಂದು ನಿದರ್ಶನದ ಹೆಣ್ಣು 'ಸೋತು ಗೆದ್ದವಳು' ಕಾದಂಬರಿಯ ನಾಯಕಿ 'ಭಾರತಿ'. ದಾಂಪತ್ಯ, ಜೀವನದ ವಿಧಿ, ನಿಷೇಧಗಳನ್ನು ದಾಟಿ ಪರಪುರುಷನೊಂದಿಗೆ ದೈಹಿಕ ಸಂಬಂಧ ಹೊಂದುತ್ತಾಳೆ. ಆದರೆ ಇಲ್ಲಿ ಭಾರತಿ ರತ್ನಳಿಗಿನ್ನ ಭಿನ್ನ ವ್ಯಕ್ತಿತ್ವದವಳಾಗಿ ಕಂಡುಬರುತ್ತಾಳೆ. ಗಂಡ ವಿದೇಶದಲ್ಲಿದ್ದ ಸಂದರ್ಭದಲ್ಲಿ ತನ್ನಲ್ಲಿ ಎದ್ದ ಕಾಮನೆಗಳನ್ನು ದಹಿಸಲಾಗದೆ, ಆತ್ಮಸಂಯಮ ಸಾಧಿಸಲಾರದೆ ದುರ್ಬಲ ಗಳಿಗೆಯಲ್ಲಿ ತನ್ನ ಅತ್ತೆಯ ತಮ್ಮನಿಗೆ ದೇಹ ಒಪ್ಪಿಸುತ್ತಾಳೆ. ಎದುರಿಗಿದ್ದು ತನ್ನ ವರ್ತನೆಯಿಂದ ಭಾರತಿಯನ್ನು ಕೆಣಕುವ ಚಂದುವಿನಿಂದ ಪಾರಾಗುವ ದಿಟ್ಟತನ ಗಟ್ಟಿ ಮನಸ್ಸು ಮಾಡದೆ ತಿಳಿದು –ತಿಳಿದು ಜಾರುವ ಭಾರತಿ ತೀರ ದುರ್ಬಲ ವ್ಯಕ್ತಿತ್ವದ ಹೆಣ್ಣಾಗಿ ಕಂಡುಬರುತ್ತಾಳೆ.

ದುರ್ಬಲ ಸಂದರ್ಭದಲ್ಲಿ ತಪ್ಪಿಸಿಕೊಳ್ಳಲಾಗದ ಅವಳ ಅಸಹಾಯಕ ಸ್ಥಿತಿ ಈ ಕೆಳಗಿನ ಸಂದರ್ಭವಲ್ಲಿ ವ್ಯಕ್ತವಾಗಿದೆ.

"ನನ್ನ ಮೇಲೆ ನಿಮಗೆ ಕನಿಕರವಿಲ್ಲವೆ? ನನ್ನ ಕಾಡಬೇಡಿ" ಎಂದು ಹೇಳುತ್ತಾ ಭಾರತಿ ದನಿ ಕುಗ್ಗಿ ಒಣಗೆ ಗಂಟಲಿನಿಂದ ಸದ್ದೇ ಹೊರಡಲಿಲ್ಲ. ಭಾರತಿ ಕೊನೆಯ ಬಾರಿ ಎರಡು ಕೈಗಳಿಂದಲೂ ಅವನೆದೆ ಹಿಡಿದು ದೂರ ತಳ್ಳಿದಳು. ಆದರೆ ಚಂದು ಒಂದು ಅಂಗುಲವು ಕದಲಲಿಲ್ಲ. ಅವಳು ಅವನನ್ನು ಪ್ರತಿಭಟಿಸುತ್ತಿದ್ದಂತೆ ಚಂದು ಶಾಂತವಾದ ದನಿಯಲ್ಲಿ,

"ವ್ಯರ್ಥವಾಗಿ ನನ್ನನ್ನೇಕೆ ಎದುರಿಸುವೆ ಭಾರತಿ? ನಾನು ನಿನ್ನನ್ನು ಬಯಸುತ್ತಿರುವಂತೆಯೇ ನೀನೂ ನನ್ನನ್ನು ಬಯಸುತ್ತಿರುವೆ. ಇದರಲ್ಲಿ ತಪ್ಪಾದರೂ ಏನು? ನಿಸರ್ಗದೊಡನೆ ನಾವು ಕಾದಾಡಲು ಸಾಧ್ಯವೇ? ಎನ್ನುತ್ತಾ ಅವಳೆರಡು ಕೈಗಳನ್ನು ತನ್ನ ಒಂದು ಕೈಯಲ್ಲಿ ಹಿಡಿದು ತಲೆ ತಗ್ಗಿಸಿ ವಿಹ್ವಲಳಾಗಿ, ನಿಸ್ಸಹಾಯಕಳಾಗಿ, ಕಣ್ಣಿನ ತುಂಬ ನೀರು ತುಂಬಿಕೊಂಡು ನಿಂತಿದ್ದ ಭಾರತಿಯ ಗಲ್ಲವನ್ನು ಹಿಡಿದೆತ್ತಿ ಅವಳ ಮುಖ ನೋಡಿದ. ಬೇಟೆಗಾರನ ಬಲೆಯೊಳಗೆ ಸಿಕ್ಕಿಬಿದ್ದು ತಪ್ಪಿಸಿಕೊಳ್ಳಲು ಸಾಧ್ಯವಿಲ್ಲದೇ ತೆಪ್ಪಗೆ ಬಿದ್ದುಕೊಳ್ಳುವ ಪ್ರಾಣಿಯಂತೆ, ನಿಸರ್ಗದ ಬಲೆಯೊಳಗೆ ಬಿದ್ದ ಹೆಣ್ಣು ಮೌನವಾಗಿ ನಿಂತಳು.

ದುರ್ಬಲ ಮನಸ್ಸಿನ ಹೆಣ್ಣೊಬ್ಬಳು ಸಹಜ ಸುಖಕ್ಕೆ ಬಲಿಯಾಗುವ ಅಸಾಯಕ ಸ್ಥಿತಿ ಉದ್ಭವವಾಗುವ ಎಲ್ಲಾ ಸಂದರ್ಭಗಳು ಇಲ್ಲಿ ಸೃಷ್ಟಿಯಾಗಿದೆ. ಅವಳು ಉದ್ದೇಶಪೂರ್ವಕವಾಗಿ ತಪ್ಪು ಮಾಡಿಲ್ಲ ತನ್ನದಲ್ಲದ ಧೂರ್ತವಿಧಿಗೆ ಬಲಿಯಾಗಿದ್ದಾಳೆ. ಅದಕ್ಕೆ ಅವಳ ಪಶ್ಚಾತ್ತಾಪ ಅವಳ ಮನಸ್ಸಿನ ತೊಳಲಾಟದ ಈ ಮಾತುಗಳು ಸಾಕ್ಷಿಯಾಗಿದೆ.

"ಅವಳನ್ನು ತನ್ನ ಸುಖಕ್ಕಾಗಿ ಬಳಸಿಕೊಂಡು ಸಮಾಧಾನ ಪಡಿಸುವ ನಾಟಕವಾಡುವ ಚಂದು. ನನ್ನ ಮಾತಿನಿಂದ ನೋವಾಯಿತೇ? ನೀನು ಅತ್ತರೆ ನನಗೂ ನೋವಾಗುತ್ತದೆ" ಎಂದು ಹೇಳಿದಾಗ,

"ನನ್ನ ದುರ್ಬಲತೆಗಾಗಿ ಅಳುತ್ತಿದ್ದೇನೆ"

ಚಂದುವಿನ ಮುಖದಲ್ಲಿ ವಿಷಾಧದ ಛಾಯೆ ಮೂಡಿ ಮರೆಯಾಯಿತು. "ಕಾಮ ಪ್ರೇಮದ ಮೊದಲ ಮೆಟ್ಟಿಲಾದರೂ ಆಗಬಹುದಲ್ಲವೆ? ಒಂದಲ್ಲ ಒಂದು ದಿನ ನೀನು ನನ್ನನ್ನು ಪ್ರೀತಿಸಬಹುದಲ್ಲವೆ?

"ಅದು ಎಂದೆಂದಿಗೂ ಸಾಧ್ಯವಿಲ್ಲ"

"ಪುರುಷನ ಸಾನಿಧ್ಯದಲ್ಲಿ ಬಹಳ ದಿನಗಳಿಂದಲೂ ಅದುಮಿದ ಆಸೆ, ಬಯಕೆಯನ್ನು ಭಾರತಿ ಅದಿಸ ಮೆಟ್ಟಲಾರದೇ ಹೋದಳು. ನಿಸರ್ಗದ ಕರೆಗೆ ಓಗೊಟ್ಟು ತನ್ನ ಪ್ರೇಮಿಸಿದಾತನಿಗೆ ತನ್ನನ್ನು ಒಪ್ಪಿಸಿಕೊಂಡಳು. ಅವನ ಮಾತಿನ ಮೋಡಿಗೆ, ಪ್ರೀತಿಯ ನುಡಿಗೆ ಭಾರತಿ ಮರುಳಾದಳು"

ಭಾರತಿ ದುರ್ಬಲ ಸ್ಥಿತಿಯಿಂದ ಎಚ್ಚೆತ್ತ ಕೂಡಲೇ ತನ್ನ ತಪ್ಪು ಹಾಗೂ ತಾನು ತನ್ನ ಗಂಡನಿಗೆ ದ್ರೋಹ ಮಾಡಿದೆನೆಂದು ಕೊರಗುತ್ತಾಳೆ. ಅದು ಕೆಳಗಿನ ಸಂದರ್ಭದಲ್ಲಿ ವ್ಯಕ್ತವಾಗಿದೆ.

"ಕೈ ಹಿಡಿದ ಗಂಡನಿಗೆ ಎರಡು ಬಗೆದ ಮನಸ್ಸು ಅವಳನ್ನು ಕುಕ್ಕಿ ಹಿಂಸಿಸಿತು."

"ಕ್ಷಣಿಕ ಸುಖಕ್ಕಾಗಿ ಕಾಲು ಜಾರಿದುದು ತಪ್ಪು" ಎಂದು ಒಂದು ಮನಸ್ಸು ನುಡಿದರೆ ಮತ್ತೊಂದು ಮನಸ್ಸು ಖಂಡಿತ ತಪ್ಪಿಲ್ಲ. ನಿಸರ್ಗದ ಬಲೆಗೆ ಬಿದ್ದ ನೀನು ಮತ್ತೇನು ಮಾಡಲು ಸಾಧ್ಯವಿರಲಿಲ್ಲ ಎಂದು ಸಮಾಧಾನಪಡಿಸುತ್ತಿತ್ತು. ಎರಡು ಮನ್ಸಸ್ಸಿನ ಇಕ್ಕಳದೊಳಗೆ ಸಿಕ್ಕ ಅವಳ ಆತ್ಮ ನೀರಿನಿಂದ ಹೊಅಗೆ ತೆಗೆದ ಮೀನಿನಂತೆ ಒದ್ದಾಡಿತು.

ಭಾರತಿ ತನ್ನ ತಪ್ಪಿಗೆ ಪರಿಸ್ಥಿತಿಯ ನೆಪಹೊಡ್ಡಿ ತಪ್ಪಿಸಿಕೊಳ್ಳಲು ಪ್ರಯತ್ನಿಸುವುದಿಲ್ಲ. ಅದನ್ನು ಈ ಸಮಾಜ ಒಪ್ಪುವುದು ಇಲ್ಲಿ ಹೆಣ್ಣಾದವಳು ಎಚ್ಚರದಿಂದಿರಬೇಕು. ಗಂಡು-ಹೆಣ್ಣಿನ ಅನೈತಿಕ ಪ್ರಶ್ನೆ ಬಂದಾಗ ಗಂಡು-ಹೆಣ್ಣಿನಷ್ಟೇ ಕಾರಣನೆಂಬುದು ವಿವೇಚಿಸುವುದಿಲ್ಲ. ಇಲ್ಲಿ ದೂಷಣೆಗೆ ಒಳಗಾಗುವವಳು, ಪಾಪದ ಫಲ ಅನುಭವಿಸುವವವಳು ಹೆಣ್ಣು ಮಾತ್ರ. ಗಂಡಿನ ಪಾತ್ರ ಇಲ್ಲಿ ಗೌಣವಾಗುತ್ತದೆ ಹಾಗೂ ಪ್ರಶ್ನೆ ಮಾಡಿದರೆ ಗಂಡು ತಾಂಮ್ರದ ಬಿಂದಿಗೆಯ ಹಾಗೆ ಅದು ಕೊಳೆಯಾದರೆ ಮತ್ತೆ ತೊಳೆದು ಬಳಸಬಹುದು. ಆದರೆ ಹೆಣ್ಣು ಕೆಟ್ಟರೆ ಒಡೆದ ಮಡಿಕೆಯಂತೆ ಮತ್ತೆ ಅವಳಿಗೆ ಸಮಾಜದಲ್ಲಿ ಮನ್ನಣೆ ದೊರಕಲು ಸಾಧ್ಯವಿಲ್ಲ ಎಂಬ ಪಾರಂಪರಿಕ ಅಭಿಪ್ರಾಯಗಳಿಗೆ ಭಾರತಿ ಇಲ್ಲಿ ವ್ಯತಿರಿಕ್ತತವಾಗಿ ತ್ರಿವೇಣಿ ಮೂಡಿಸಿದ್ದಾರೆ.

ಇಲ್ಲಿ ತ್ರಿವೇಣಿಯವರು ವಿವಾಹೇತರ ಸಂಬಂಧಗಳಲ್ಲಿ ಕುರುಡು ಖಂಡನೆಯನ್ನು ಒಪ್ಪುವುದಿಲ್ಲ. ಗಂಡಾಗಲಿ, ಹೆಣ್ಣಾಗಲಿ ತಪ್ಪು ಮಾಡುವುದು ಸಹಜ. ಆದರೆ ಗಂಡಿನ ತಪ್ಪನ್ನು ಮಾನ್ಯ ಮಾಡುವ ಸಮಾಜ ಹೆಣ್ಣಿನ ತಪ್ಪಿಗೆ ಮಾತ್ರ ಇಲ್ಲದ ಪ್ರಾಮುಖ್ಯತೆ ಕೊಟ್ಟು ಅವಳನ್ನು ಮಾತ್ರ ಶಿಕ್ಷಿಸುವುದು ಎಷ್ಟರ ಮಟ್ಟಿಗೆ ಸರಿ ಎಂಬುದೇ ಇಲ್ಲಿಯ ಪ್ರಶ್ನೆಯಾಗುತ್ತದೆ.

ಭಾರತಿ ತಪ್ಪು ಮಾಡಿದ ಮೇಲೆ ಪಶ್ಚಾತ್ತಾಪದಿಂದ ಬೆಂದು ಗಂಡನಲ್ಲಿ ಕ್ಷಮೆಯಾಚಿಸಿ ಅವನಿಂದ ದೂರವಾಗಿ ಮನೆಬಿಟ್ಟು ಹೋಗುವುದಾಗಿ ನಿರ್ಧಾರ ಮಾಡಿಕೊಂಡು, ಆನಂದ ವಿದೇಶದಿಂದ ಬರುವವರೆಗೂ ಕಾಯುತ್ತಾಳೆ. ಕ್ಷಮಿಸುವ ಆನಂದನ ಸಂದರ್ಭವಾದರು ಮಾರ್ಮಿಕವಾಗಿದೆ.

ಆನಂದನಾದರೂ ತಪ್ಪು ಮಾಡದೆ ತಪ್ಪು ಮಾಡಿದ ತನ್ನ ಹೆಂಡತಿಯನ್ನು ಕ್ಷಮಿಸಿದನೆ, ಒಂದು ವೇಳೆ ಅವನು ತಪ್ಪು ಮಾಡದೆ ಅವಳನ್ನು ಕ್ಷಮಿಸಿದ್ದರೆ ಅದರಲ್ಲಿ ಅವನು ಮಹತ್ವದವನಾಗುತ್ತಿದ್ದೆ. ಆದರೆ ಉದ್ರೇಕದಲ್ಲಿ ಪರಹೆಣ್ಣಿನೊಂದಿಗೆ ದೈಹಿಕ ಸಂಬಂಧ ಇಟ್ಟುಕೊಂಡಿದ್ದ ಆನಂದ ಆ ಪಾಪಪ್ರಜ್ಞೆ ಅವನನ್ನು ಕ್ಷಮಿಸುವಂತೆ ಮಾಡಿತು. 'ಅವಳು ಪತಿತೆಯಾದರೆ ಅವನು ಪತಿತ' ಈ ಸಂದರ್ಭದಲ್ಲಿ ಕ್ಷಮೆಯೂ ತನ್ನ ಮಹತ್ವ ಕಳೆದುಕೊಳ್ಳುತ್ತದೆ. ಅವಳು ಮಾತ್ರ ಪತಿತೆಯಾಗಿದ್ದರೆ ಆ ಸಂದರ್ಭದಲ್ಲಿ ಆನಂದ ಅವಳನ್ನು ಕ್ಷಮಿಸಿ ಆದರಿಸುತ್ತಿದ್ದನೇ? ಎಂಬುದು ಪ್ರಶ್ನೆಯಾಗಿ ಉಳಿಯುತ್ತದೆ.

ಇಲ್ಲಿ ಭಾರತಿ ಹಾಗೂ ತಾವರೆಕೊಳದ ರತ್ನಗೂ ಹೋಲಿಸಿದರೆ ಅಜಗಜಾಂತರ ವ್ಯತ್ಯಾಸವಿದೆ. ರತ್ನ ತನ್ನ ದೇಹದ ದೌರ್ಬಲ್ಯವನ್ನು ಮೆಟ್ಟಿನಿಲ್ಲುವ ಮನಸ್ಸಿನ ಸಂಯಮ ಸಾಧಿಸುವ ವಿಶಿಷ್ಟ ವ್ಯಕ್ತಿತ್ವದ ಹೆಣ್ಣಾಗಿದ್ದಾರೆ ಆದರೆ ಭಾರತಿ ತನ್ನ ಸಹಜ ಪ್ರವೃತ್ತಿಯ ದುರ್ಬಲ ಬಲೆಯಿಂದ ತಪ್ಪಿಸಿಕೊಳ್ಳಲಾಗದೆ ಅಸಮರ್ಥಳಾಗಿ ತಪ್ಪು ಮಾಡುತ್ತಾಳೆ.

ಆದರೆ ಇಬ್ಬರೂ ಹೆಣ್ಣುಗಳ ದೌರ್ಬಲ್ಯಗಳು ಒಂದೇ ಆದರೂ ಬೇರೆ ಬೇರೆ ಸ್ಥಿತಿ ನಿರ್ಮಾಣವಾಗಿದೆ. ಒಂದು ಮನಸ್ಸು ಗಟ್ಟಿಯಾದ ಮತ್ತೊಂದು ದುರ್ಬಲವಾಗಿದೆ. ಎರಡು ಸಂದರ್ಭದ ಸುಳಿಗೆ ಸಿಕ್ಕಿ ಒಂದು ಸೋತರೆ ಮತ್ತೊಂದು ಗೆಲ್ಲುತ್ತದೆ. ಆದರೆ ಇಲ್ಲಿ ಎರಡು ಪಾತ್ರಗಳಲ್ಲಿಯು ತಮ್ಮದೇ ಆದ ರೀತಿಯಲ್ಲಿ ಸಮರ್ಥನೆ ಕಂಡುಕೊಳ್ಳುತ್ತವೆ.

ಇಲ್ಲಿ ಎರಡು ಭಿನ್ನ ವ್ಯಕ್ತಿತ್ವದ ಹೆಣ್ಣುಗಳನ್ನು ಚಿತ್ರಿಸಿರುವುದದು ಒಂದೇ ಹೆಣ್ಣು 'ತ್ರಿವೇಣಿ' ಸಮಾಜದಲ್ಲಿ ಬೇರೆ ಬೇರೆ ರೀತಿಯ ವರ್ತನೆಯ ಹೆಣ್ಣುಗಳು ಅವರದೇ ಆದ ಸಾಂದರ್ಭಿಕ ಒತ್ತಡಗಳ ಹಿನ್ನೆಲೆಯಲ್ಲಿ ತಮ್ಮ ಅಸ್ತಿತ್ವಗಳನ್ನು ಉಳಿಸಿಕೊಳ್ಳುವ ಹಲವು ವ್ಯಕ್ತಿತ್ವದ ಹೆಣ್ಣುಗಳನ್ನು ಅವರದೇ ಆದ ರೀತಿಯಲ್ಲಿ ಸಮರ್ಥಿಸಿಕೊಳ್ಳುವ ಭಿನ್ನ ಹೆಣ್ಣುಗಳ ನೆಲೆಯನ್ನು ಗುರುತಿಸಿರುವುದು ನಿಜಕ್ಕೂ ತ್ರಿವೇಣಿಯಲ್ಲಿನ ಸ್ತ್ರೀಸಂವೇದನೆಯ ಅದ್ಯತೆಯೇ ಆಗಿದೆ.

ವಿವಾಹಬಾಹಿರ ದೈಹಿಕ ಸಂಬಂಧವನ್ನು ಹೊಂದಿರುವ ಹೆಣ್ಣುಗಳನ್ನು ತ್ರಿವೇಣಿಯವರು ಹೀನವೆಂಬಂತೆ ಕಾಣುವುದಿಲ್ಲ ಜೊತೆಗೆ ಅವರ ತಪ್ಪುಗಳ ಸಹಜವಾದುದು ಗಂಡಿಗೆ ಹೇಗೆ ದೌರ್ಬಲ್ಯಗಳಿರುತ್ತವೆಯೂ ಹಾಗೆ ಹೆಣ್ಣಿಗೂ ದೌರ್ಬಲ್ಯಗಳಿರುತ್ತವೆ. ಗಂಡಿನ ಅಪರಾಧವನ್ನು ಮನ್ನಿಸುವ ಸಮಾಜ ಹೆಣ್ಣಿನ ತಪ್ಪನ್ನು ಮಾತ್ರ ಅಪರಾಧವೆಂದು ಗುರುತಿಸಿ ಅವಳನ್ನು ಅಕ್ಷಮ್ಯ ಶಿಕ್ಷೆಗೆ ಗುರಿಮಾಡುವುದನ್ನು ಈ ಹೆಣ್ಣುಗಳ ಸಮರ್ಥನೆಯ ಮೂಲಕ ಪ್ರತಿಪಾದಿಸಿದ್ದಾರೆ.

ಗಂಡಿನ ಸ್ವಾರ್ಥ, ಸಣ್ಣತನ, ವಂಚನೆಗೆ ತಕ್ಕ ಉತ್ತರ ಕೊಡುವ ದಿಟ್ಟ ವ್ಯಕ್ತಿತ್ವದ ಹೆಣ್ಣು 'ಬೆಳ್ಳಿಮೋಡ'ದ ಇಂದಿರಾ ಹೆಣ್ಣಿಗೂ ಆಯ್ಕೆಯ ಅಧಿಕಾರವಿದೆ. ತನ್ನತನವಿದೆ. ವಿಚಾರ ಸ್ವತಂತ್ರ್ಯವಿದೆ, ಸ್ವಾಭಿಮಾನ, ಸ್ವಂತಿಕೆ, ಆತ್ಮಗೌರವವಿದೆ ಎಂಬುದನ್ನು ಇದಿರಾ ದೃಢವಾಗಿ ಪ್ರತಿಪಾದನೆಯಾಗಿದೆ.

ಅಷ್ಟೇನು ಸುಂದರಿಯಲ್ಲದ ಕಪ್ಪಾದ ಹೆಣ್ಣನ್ನು ರೂಪವಂತ, ವಿದ್ಯಾವಂತನಾದ ಮೋಹನ ತನ್ನನ್ನು ಮೆಚ್ಚಿ ಮದುವೆಯಾಗಲು ಒಪ್ಪಿದ್ದು ನಿರ್ಮಲವಾದ ಪ್ರೀತಿಯಿಂದ ತನ್ನ ಮನಸ್ಸಿನ ಮೆಚ್ಚಿ ಆಕರ್ಷಣೆಗೆ ಒಳಗಾಗಿದ್ದಾನೆಂದು ಭಾವಿಸಿ ಅವಳು ಕೂಡ ಅದನ್ನು ನಂಬಿ ಅವಳು ಅವನನ್ನು ಮದುವೆಯಾಗಲು ಒಪ್ಪಿದಳು. ಆದರೆ ಮೋಹನ ತನ್ನ ಆಸ್ತಿಗೆ ಹಣದ ಆಸೆಗೆ ಬಲಿಯಾಗಿ ಪ್ರೀತಿಯ ನಾಟಕವಾಡುತ್ತಿದ್ದಾನೆ ಎಂಬ ಸತ್ಯ ಅವಳಿಗೆ ತಿಳಿಯುವುದು ತನ್ನ ಆಸ್ತಿಗೆ ಮತ್ತೊಬ್ಬ ವಾರಸುದಾರ ಹುಟ್ಟಿದ ನಂತರವೇ ಮೋಹನ ಬದಲಾಗಿ ಅವಳನ್ನು ಮದುವೆಯಾಗಲು ನಿರಾಕರಿಸುವ ಸಂದರ್ಭದ ಅವಳ ದಿಟ್ಟತನ ಪ್ರದರ್ಶನವನ್ನು ಈ ಕೆಳಗಿನ ಸಂಭಾಷಣೆಯಲ್ಲಿ ಕಾಣಬಹುದು.

"ನನ್ನನ್ನು ನೀವು ಮದುವೆಯಾಗದಿರಲು ಕಾರಣವೇನು? ನೀವು ಅಳಿಯನಾಗುವಿರಿ ಎಂಬ ಉದ್ದೇಶದಿಂದ ಅಣ್ಣ ನಿಮ್ಮನ್ನು ವಿದೇಶಕ್ಕೆ ಕಳುಹಿಸಿದರು. ನಿಮ್ಮ ವ್ಯಾಸಂಗ ಮುಗಿದ ಮೇಲೆ ಸ್ವದೇಶಕ್ಕೆ ಹಿಂತಿರುಗಿ ಈಗ ನನ್ನ ಬಿಡುಗಡೆ ಮಾಡು ಎಂದರೆ ಅರ್ಥವೇನು? ಎಂದು ಇಂದಿರ ಮೋಹನನ್ನು ಪ್ರಶ್ನಿಸುತ್ತಾಳೆ.

"ನಿಮ್ಮ ತಂದೆಯಿಂದ ತೆಗೆದುಕೊಂಡ ಹಣವನ್ನು ಸಾಲ. . ."

"ನಮ್ಮ ತಂದೆ ಲೇವಾದೇವಿ ಮಾಡುವವರ ಗುಂಪಿಗೆ ಸೇರಿದವರಲ್ಲ ಯಾರಿಗಾದರೂ ಹಣ ಕೊಟ್ಟರೆ ಪ್ರೀತಿಗಾಗಿ ಕೊಡುತ್ತಾರೆ. ಇಲ್ಲವಾದರೆ. ."

"ಇಲ್ಲವಾದರೆ?" ಮೋಹನ ಕುತೂಹಲದಿಂದ ಕೇಳಿದ.

"ಧರ್ಮಾರ್ಥವಾಗಿ ಕೊಡುತ್ತಾರೆ"

ಮೋಹನನಿಗೆ ಕೆನ್ನೆಯ ಮೇಲೆ ರಪ್ಪನೆ ಹೊಡೆದಂತಾಯಿತು.

"ಧರ್ಮ ಮಾಡಿದರೂ ಯೋಗ್ಯತೆಯುಳ್ಳವರಿಗೆ ದಾನ ಮಾಡಬೇಕು ಸತ್ಪಾತ್ರರಿಗೆ. . ."

"ಸಾಕು ಇಂದಿರಾ."

ಈ ಮಾತುಗಳಲ್ಲಿ ಇಂದಿರಾಳ ದಿಟ್ಟವಾಗಿ ಮೋಹನನ ಮೋಸವನ್ನು ಬಯಲು ಮಾಡಲು ಪ್ರಯತ್ನಿಸುತ್ತಾಳೆ. ಅವನ್ನು ತನ್ನನ್ನು ನಿರಾಕರಿಸಲು ಕಾರಣವೇನೆಂಬುದು ಸೂಕ್ಷ್ಮವಾಗಿ ಗ್ರಹಿಸಿ ಅವನ ಬಣ್ಣ ಬಯಲು ಮಾಡುತ್ತಾಳೆ. ಆ ಸಂದರ್ಭ ಈ ಕೆಳಗಿನ ಸಂದರ್ಭದಲ್ಲಿ ವ್ಯಕ್ತವಾಗಿದೆ.

ಮೋಹನ ಹೇಳುತ್ತಾನೆ.

"ಊಹೂಂ, ಕಾರಣ ನನಗೆ ಗೊತ್ತಿಲ್ಲ, ನಿನ್ನನ್ನು ಮದುವೆಯಾಗಲು ನನ್ನ ಮನಸ್ಸೊಪ್ಪುತ್ತಿಲ್ಲ."

"ನೀವು ಬೇರೆ ಯಾರನ್ನಾದರೂ ಪ್ರೀತಿಸುತ್ತಿರುವಿರಾ?"

"ಇಲ್ಲ"

"ಹಾಗಾದರೆ ನನ್ನನ್ನು ಮದುವೆಯಾಗಲು ನೀವು ನಿರಾಕರಿಸುತ್ತಿರುವುದಕ್ಕೆ ಕಾರಣ ತಿಳಿಯಿತು."

"ಏನು ಕಾರಣ?"

"ಗಿರಿ"

ಮೋಹನ ನಾಲಿಗೆ ಕಳೆದುಕೊಂಡು ಮೂಕನಂತಾದ.

"ಮತ್ತೆ. . ."

"ಸಾಕು ಸುಮ್ಮನಾಗಿ ನಾನೇನು ಎಳೆಯ ಮಗುವಲ್ಲ. ರೈಲ್ವೆ ಸ್ಟೇಷನಲ್ಲಿ ನಿಮ್ಮನ್ನು ನೋಡಿದ ಕೂಡಲೇ ನನಗೆ ತೋರಿತು. ನಾನು ವಿದೇಶಕ್ಕೆ ಕಳುಹಿಸಿಕೊಟ್ಟ ಮೋಹನ ಇವರಲ್ಲ. ಅದೇ ಗಾತ್ರ, ನಿಲುವು, ರೂಪು. ಆದರೆ ಈ ಮೋಹನ ಬೇರೆ ತಾನಾಗಿಯೇ ಪ್ರೀತಿಯಿಂದ ಪ್ರೇಯಸಿಯ ಬಳಿಗೆ ಹಾರಿಬರುವ ಪ್ರಿಯನಿಗೂ, ಯಾವುದೋ ಕಟ್ಟಿಗೆ ಒಳಗಾಗಿ ಬಲವಂತವಾಗಿ ತಳ್ಳಲ್ಪಟ್ಟವನಿಗೂ ನನಗೆ ವ್ಯತ್ಯಾಸ ತಿಳಿಯುತ್ತದೆ."

"ಇಷ್ಟೆಲ್ಲಾ ಸುಳಿವು, ಸೂಕ್ಷ್ಮ ತಿಳಿಯುವವಳಿಗೆ ನಾನು ವಿದೇಶಕ್ಕೆ ಹೊರಟಾಗ. . ."

ಒತ್ತಿಬಂದ ಸಂಕೋಚದಿಂದ ಮೋಹನ ತನ್ನ ಮಾತನ್ನು ನುಂಗಿಕೊಂಡ.

"ಊಹೂಂ ಆಗ ನನಗೆ ತಿಳಿಯಲಿಲ್ಲ ನನಗಾಗಿಯೇ ನೀವು ನನ್ನ ಕೈ ಹಿಡಿಯಲು ಒಪ್ಪಿರುವಿರಿ ಎಂದು ನಾನು ಭಾವಿಸಿದ್ದೆ. ಅಲ್ಲದೆ ಆಗ ನಾನು ಎರಡು ವರ್ಷ ಚಿಕ್ಕವಳಾಗಿದ್ದೆ. ಈ ಎರಡು ವರ್ಷಗಳಲ್ಲಿ ಅನುಭವ, ಜೀವನ ನನಗೆ ಎಷ್ಟೋ ತಿಳುವಳಿಕೆಯನ್ನುಂಟು ಮಾಡಿವೆ. ನಿಮಗೆ ಬೇಕಾಗಿದ್ದುದು ನನ್ನ ತಂದೆಯ ಆಸ್ತಿ".

"ನಿಮ್ಮ ಕಣ್ಣಿನ ಹೊಳಪನ್ನು ಪ್ರೇಮದ ಬೆಳಕೆಂದು ಭ್ರಮಿಸಿದೆ. ಆಗ ನಿಮ್ಮ ಕಣ್ಣುಗಳಲ್ಲಿ ಉರಿಯುತ್ತಿದ್ದುದು ಹಣದ ದಾಹ".

ಇಂದಿರಾಳಿಗೆ ಮೋಹನನ ನಿಜವಾದ ವ್ಯಕ್ತಿತ್ವ ತಿಳಿದ ಮೇಲೆ ಅವಳ ಮನಸ್ಸು ಒಡೆಯುತ್ತದೆ. ಈ ಕ್ಷಣವೆ ಅವನ ಮೇಲಿದ್ದ ಪ್ರೀತಿ ಸಾಯುತ್ತದೆ. ಆಸ್ತಿಗಾಗಿ ಪ್ರೀತಿಯ ಮುಖವಾಡ ಹಾಕಿದ ವ್ಯಕ್ತಿಯ ಮೇಲೆ ಪ್ರೀತಿ ಭಾವನೆ ಅರ್ಥವಿಲ್ಲದೆಂದಿನಿಸುತ್ತದೆ ಅವಳಿಗೆ. ಗಂಡು ಹೆಣ್ಣಿನ ಒಲಿದ ಹೃದಯಗಳೇ ಪರಸ್ಪರ ಒಂದಾದ ಮನಸ್ಸುಗಳ ನಿಜವಾದ ಅರ್ಥದಲ್ಲಿ ಪ್ರೇಮ. ಇದಲ್ಲದೆ ಕೇವಲ ವ್ಯವಹಾರಿಕ ದೃಷ್ಟಿಯಿಂದ ಗಂಡು-ಹೆಣ್ಣುಗಳನ್ನು ಒಂದುಗೂಡಿಸುವ ಮದುವೆ ಅರ್ಥವಿಲ್ಲವೆಂಬುದನ್ನು ಇಂದಿರಾ ಮನಗಾಣುತ್ತಾಳೆ. ಇದನ್ನು ತನ್ನ ತಂದೆಗೂ ಅವಳೆದೇ ಆದ ರೀತಿಯಲ್ಲಿ ಅರ್ಥಮಾಡಿಸಿ ತನ್ನ ಗಟ್ಟಿತನದ ನಿರ್ಧಾರವನ್ನು ಯಾವ ಕಾರಣಕ್ಕೂ ಬದಲಿಸಲು ಸಾಧ್ಯವಿಲ್ಲವೆಂಬುದನ್ನು ಈ ಕೆಳಗಿನ ಸಂಭಾಷಣೆಯಲ್ಲಿ ವ್ಯಕ್ತವಾಗಿದೆ.

ಇಂದಿರಾಳ ತಂದೆ ಮಗಳ ನಿರ್ಧಾರ ಕೇಳಿ ಕಂಗಾಲಾಗಿ ಅವಳ ಮನಹೊಲಿಸಲು ಪ್ರಯತ್ನಿಸುತ್ತಾರೆ. ಆ ಸಂದರ್ಭದಲ್ಲಿ ಇಂದಿರಾ

"ನನ್ನನ್ನು ಬಲವಂತ ಮಾಡಬೇಡ ಅಣ್ಣ. ಅವರನ್ನು ಮದುವೆಯಾದರೆ ನಾನು ಸುಖಿಯಾಗಿರುವುದಿಲ್ಲ ಎನಿಸುತ್ತದೆ"

"ಕಾರಣ?"

"ಮೋಹನ ತುಂಬಾ ದುರ್ಬಲ ವ್ಯಕ್ತಿ. ಆ ಬಗೆಯ ದೌರ್ಬಲ್ಯ ನನಗೆ ಹಿಡಿಸದು. ಅವರನ್ನು ನೋಡಿದರೆ ನನಗೆ ಮರುಕ ಉಕ್ಕಿಬರುತ್ತದೆ. ಆ ಮರುಕದಲ್ಲಿ ಪ್ರೀತಿಯ ಹನಿಯೇ ಇಲ್ಲ. ಪ್ರೀತಿಯಿದ್ದರೂ

ಅವರನ್ನು ಗಂಡನೆಂದು ಸ್ವೀಕರಿಸುವ ಮತ್ತೊಂದು ಬಗೆಯ ಪ್ರೀತಿ ನನ್ನಲ್ಲಿಲ್ಲ. ಅವರನ್ನು ನೋಡಿದರೆ, ನನಗೆ ಬೆಳೆದ ಗಿರಿಯನ್ನು ನೋಡಿದಂತಾಗುತ್ತದೆ."

"ದುಡುಕಬೇಡ ಇಂದಿರ, ಯೋಚಿಸು"

ಈಗ್ಗೆ ಸುಮಾರು ಮುರು ತಿಂಗಳಿನಿಂದಲೂ ಯೋಚಿಸಿದ್ದೇನೆ ಎಂದು ನಿರ್ಧಾರದಲ್ಲಿ ಯಾವುದೇ ಅನುಮಾನವಿಲ್ಲ. ಅವಳ ನಿರ್ಧಾರದಲ್ಲಿ ಆತ್ಮಗೌರವ, ದೃಢತೆ, ಗಟ್ಟಿತನವಿದೆ ಎಂಬುದನ್ನು ತೋರಿಸುತ್ತಾಳೆ.

ದುರ್ಬಲ ವ್ಯಕ್ತಿತ್ವದವನಾದ ಮೋಹನ ಜಾರಿಬಿದ್ದು ಕಾಲು ಮುರಿದುಕೊಂಡು ವಿಧಿ ಇಲ್ಲದೆ ಇಂದಿರಾ ಮನೆಯಲ್ಲಿಯೇ ಉಳಿಯುವ ಸಂದರ್ಭದ ಇಂದಿರಾಳ ಒಳ್ಳೆಯಗುಣ, ಉನ್ನತವಾದ ವ್ಯಕ್ತಿತ್ವದ ಪರಿಚಯವಾದ ಮೇಲೆ ತನ್ನನ್ನು ಮೋಸಗೊಳಿಸಿದ ನಂಬಿಕೆದ್ರೋಹಿ ಮೋಹನ ಮೇಲೆ ಸೇಡುತೀರಿಸಿಕೊಳ್ಳದೆ ಮಾನವೀಯ ದೃಷ್ಟಿಯಿಂದ ಅವನ ಸೇವೆ ಮಾಡಿದ ಸಂದರ್ಭದಲ್ಲಿ ಮೋಹನನಿಗೆ ಇಂದಿರಾಳ ಮೇಲೆ ಭಾವನೆಗಳು ಚಿಗುರುತ್ತವೆ. ಅವನು ತನ್ನ ನಡತೆಗೆ ಪಶ್ಚಾತ್ತಾಪಪಟ್ಟು ಇಂದಿರಾಳಲ್ಲಿ ಮತ್ತೆ ಪ್ರೇಮ ಯಾಚಿಸುತ್ತಾನೆ. ಆದರೆ ಸ್ವಾಭಿಮಾನಿಯಾದ ಇಂದಿರಾ "ಒಂದು ಸಲ ಒಡೆದ ಮನಸ್ಸು ಒಡೆದ ಕನ್ನಡಿಯಂತೆ, ಮತ್ತೆ ಸರಿಹೋಗಲಾರದು" ಎಂದು ತನ್ನ ಅಚಲ ನಿರ್ಧಾರ ಅವನಿಗೆ ತಿಳಿಸಿ ಅವನನ್ನು ನಿರಾಕರಿಸುತ್ತಾಳೆ

ನಿರಾಕರಿಸುವ, ಆಯ್ಕೆ ಮಾಡಿಕೊಳ್ಳುವ ಅಧಿಕಾರ ಗಂಡಿಗೆ ಮಾತ್ರವಲ್ಲ ಅದು ಹೆಣ್ಣಿಗೂ ಇದೆ. ತನ್ನ ಬದುಕಿನ ನಿರ್ಧಾರವನ್ನು ತಾನೇ ಸ್ವತಂತ್ರವಾಗಿ ತೆಗೆದುಕೊಳ್ಳಬಲ್ಲಳು ಎಂಬುದನ್ನು ಇಂದಿರಾಳ ಮೂಲಕ ವ್ಯಕ್ತವಾಗಿದೆ.

ತ್ರಿವೇಣಿಯವರ ನಾಯಕಿಯರುಗಳಲ್ಲಿ 'ಇಂದಿರಾ' ಒಂದು ವಿಶಿಷ್ಟ ವ್ಯಕ್ತಿತ್ವದವಳಾಗಿ ಕಂಡುಬರುತ್ತಾಳೆ. ಸರಿಯೋ ತಪ್ಪೋ ಎಲ್ಲವನ್ನು ಒಪ್ಪಿ ಹೆಣ್ಣು ಎಲ್ಲದಕ್ಕೂ ತಾನೇ ಸೋತು ಹೊಂದಿಕೊಂಡು ಹೋಗಬೇಕು ಎಂಬ ಸಂಪ್ರದಾಯಿಕ ಧೋರಣೆಗೆ ವ್ಯತಿರಿಕ್ತವಾಗಿ ಅಭಿಪ್ರಾಯಗಳಿಗೆ ಪ್ರತಿಯಾಗಿ ತನಗಾದ ನಿರಾಶೆಯನ್ನು ಮೆಟ್ಟಿ ಆತ್ಮಗೌರವ ಹಾಗೂ ಸ್ವಾಭಿಮಾನ ಉಳಿಸಿಕೊಳ್ಳುವ ವಿಶಿಷ್ಟ ಹೆಣ್ಣಾಗಿ ಕಂಡುಬರುತ್ತಾಳೆ.

ಸಾಂಪ್ರದಾಯಿಕ ಹಿಂದೂ ಸಮಾಜ ವ್ಯವಸ್ಥೆಯಲ್ಲಿ ಹೆಣ್ಣು ಅವಳ ಸ್ಥಾನ ಕುಟುಂಬಕ್ಕೆ ಮಾತ್ರ ಸೀಮಿತವಾಗಿದ್ದು, ತನ್ನ ಪತಿ ಮತ್ತು ಮಕ್ಕಳಲ್ಲಿಯೇ ತೃಪ್ತಿಯನ್ನು ಕಂಡುಕೊಳ್ಳಬೇಕಾಗಿತ್ತು. ಆ ಚೌಕಟ್ಟಿನೊಳಗೆ ಅವಳನ್ನು ಬೆಳೆಸಲಾಗಿತ್ತು. ಪತಿಗೆ ನಿಷ್ಠೆ, ಮಕ್ಕಳಿಗೆ ಮಮತೆ ಇವೆರಡರ ಹೊರತಾದ ತನ್ನದೇ ಆದ ಸ್ವತಂತ್ರ್ಯ

ವ್ಯಕ್ತಿತ್ವವೆಂಬುದು ಕಂಡುಕೊಳ್ಳಲು ಸಾಧ್ಯವಾಗಿರಲಿಲ್ಲ. ಆದರೆ ಬದಲಾದ ಕಾಲದಲ್ಲಿ ಅವಳಿಗೂ ಶಿಕ್ಷಣ ದೊರೆತು ಅವಳ ಆಲೋಚನಾ ಕ್ರಮದಲ್ಲಿ ಬದಲಾವಣೆಗಳು ಉಂಟಾಗಿತು. ತನ್ನ ಸ್ಥಿತಿ ಸ್ಥಾನಗಳ ನಿಜ ವಾಸ್ತವತೆ ಅರ್ಥಮಾಡಿಕೊಂಡು ತಾನು ತನ್ನದಲ್ಲದ ಯಾವುದೋ ಒಂದು ಕೇಂದ್ರಕ್ಕೆ ಬದ್ಧವಾಗಿರುವ ಸತ್ಯ ಅರಿತುಕೊಂಡ ತನ್ನ ವ್ಯಕ್ತಿತ್ವದ ಉಳಿವಿಗಾಗಿ ಹೋರಾಡಲು ಪ್ರಯತ್ನಿಸಿದಳು. ಅಂತ ಆರು ಜನ ಅವಿವಾಹಿತ ಹೆಣ್ಣುಗಳನ್ನು 'ಕಂಕಣ' ಮತ್ತು 'ಮುಕ್ತಿ' ಕಾದಂಬರಿಯಲ್ಲಿ ಕಾಣಬಹುದು.

ಸಮಾಜದ ವಿಭಿಧ ವರ್ಗಗಳಿಗೆ ಸೇರಿದ ಬೇರೆ ಬೇರೆ ಕೌಟುಂಬಿಕ ಹಿನ್ನೆಲೆಯಿರುವ ಭಿನ್ನ ವ್ಯಕ್ತಿತ್ವದ ಹೆಣ್ಣುಗಳು ವಿವಾಹಕ್ಕೆ ಮೊದಲು ವಿವಾಹದ ಅನಂತರದಲ್ಲಿ ಉಂಟಾಗುವ ಸಮಸ್ಯೆಗಳಿಗೆ ಅನೇಕ ಗೊಂದಲಗಳ ನಡುವೆಯೇ ತಮ್ಮದಾದ ರೀತಿಯಲ್ಲಿ ಪರಿಹಾರಗಳನ್ನು ಶೋಧಿಸಿಕೊಂಡು ಬದುಕಿನ ನೆಲೆ ಕಂಡುಕೊಳ್ಳುತ್ತಾರೆ ಎಂಬುದನ್ನು ಗುರುತಿಸಬಹುದು.

ಜೀವನದಲ್ಲಿ ಎದುರಾಗುವ ಸಮಸ್ಯೆಗಳನ್ನು ಈ ಹುಡುಗಿಯರು ದಿಟ್ಟತನದಿಂದ ಎದುರಿಸಿ ಬದುಕುವ ಅನುಕೂಲವನ್ನು ತಾವೇ ನಿರ್ಮಾಣ ಮಾಡಿಕೊಳ್ಳುವ ಸಮಾರ್ಥ ಅವರ ಎದುರಿಸಿದ ಸಮಸ್ಯೆ ಅನುಭವದಿಂದ ಪಡೆದುಕೊಳ್ಳುತ್ತಾ ಇವರು ಎದುರಿಸುವ ಸಾಮಾನ್ಯವಾಗಿ ಬಹುಮಟ್ಟಿಗೆ ಎಲ್ಲಿ ಯುವತಿಯರೂ ಎದುರಿಸುವ ಸಾರ್ವಕಾಲಿಕ ಸಮಸ್ಯೆಗಳಾಗಿವೆ. ದುಡ್ಡು, ಅಂತಸ್ತು, ರೂಪಕ್ಕೆ ಬೆಲೆ ಕೊಡುವ ಸಮಾಜದಲ್ಲಿ ಸಾಮಾನ್ಯ ಬದುಕಿನಲ್ಲೂ ಹೇಗೆ ಸಮಸ್ಯೆಗಳು ಹೆಣೆದುಕೊಂಡಿವೆ. ಆ ಸಮಸ್ಯೆಗಳು ಒಬ್ಬೊಬ್ಬ ಹೆಣ್ಣಿನಲ್ಲೂ ಒಂದೊಂದು ರೀತಿ ಅವುಗಳಿಂದ ಬಿಡಿಸಿಕೊಂಡು ಹೆಣ್ಣು ತನ್ನದೇ ಆದ ಸ್ಥಾನಮಾನಗಳನ್ನು ಪಡೆದುಕೊಳ್ಳುವ ಈ ಆರು ಜನ ಹೆಣ್ಣುಗಳು ತಮ್ಮದೇ ಆದ ಭಿನ್ನ ವ್ಯಕ್ತಿತ್ವ ಹೊಂದಿರುವ ವಿಶಿಷ್ಟ ಹೆಣ್ಣುಗಳಾಗಿ ಕಂಡುಬರುತ್ತಾರೆ.

ವಿದ್ಯಾಭ್ಯಾಸ ಮುಗಿಸಿದ ಈ ಹುಡುಗಿಯರ ಮುಂದಿರುವ ಪ್ರಶ್ನೆ ವಿವಾಹವೋ? ಉದ್ಯೋಗವೊ? ಎಂಬ ಪ್ರಶ್ನೆ ಈ ಗೊಂದಲಕ್ಕೆ ಒಬ್ಬೊಬ್ಬರು ಒಂದೊಂದು ದಿಕ್ಕಿಗೆ ಚಲಿಸುತ್ತಾರೆ. ಇವರ ಸಮಸ್ಯೆಗಳು ಬದಲಾಗುತ್ತಿರುವ ಪರಿಸ್ಥಿತಿಯಲ್ಲಿ ಪ್ರೇಮವಿವಾಹ, ಉದ್ಯೋಗದ ಚೌಕಟ್ಟಿನ ಒಳಗೆಯೇ ತಮ್ಮ ನೆಲೆಯನ್ನು ಕಂಡುಕೊಳ್ಳುವ ಅನಿವಾರ್ಯ ಪರಿಸ್ಥಿತಿಗಳನ್ನು ಆರು ಜನರು ಎದುರಿಸುತ್ತಾರೆ.

ಈ ಆರು ಜನ ಹೆಣ್ಣುಗಳ ಸಂಕ್ರಮಣಕಾಲದ ಸಮಾಜಗಳಲ್ಲಿ ಸಾಧಾರಣವಾಗಿ ಕಂಡುಬರುವ ಎರಡು ಪ್ರಪಂಚಗಳಲ್ಲಿ ತೊಳಲಾಡುವ ಸ್ಥಿತಿ. ಒಂದು ಪೂರ್ತಿಯಾಗಿ ಇನ್ನೂ ನಾಶವಾಗದ ಪ್ರಪಂಚ ಇನ್ನೊಂದು ಈಗ

ತಾನೇ ಹುಟ್ಟಿರುವ ಪ್ರಪಂಚ. ಇಂಥ ಒಂದು ಅಸಾಧ್ಯ ಹಾಗೂ ಅಸಂಬದ್ಧ ಪ್ರಪಂಚದಲ್ಲಿ ಉಸಿರುಕಟ್ಟಿದ ಪರಿಸ್ಥಿತಿಯನ್ನು ಎದುರಿಸಲು ಆಗದೆ ಅನುಭವಿಸಲು ಆಗದ ಇಬ್ಬಂದಿ ಸ್ಥಿತಿ ಎದುರಿಸುತ್ತಾರೆ.

ಇದಕ್ಕೆ ಬಂದ ಉದಾಹರಣೆ, ಅಮೃತ ಒಂದು ವರ್ಷದಲ್ಲಿ ಹನ್ನೆರೆಡು ಬಾರಿ ಸಂಭಾವ ವರಗಳೆದುರು ಕುಳಿತು ಅನಂತರ ಅವರಿಂದ ತಿರಸ್ಕರಿಸಲ್ಪಟ್ಟಿರುವ ಅಮೃತಾ ರಮಾಳೊಡನೆ ಹೇಳಿಕೊಳ್ಳುತ್ತಾಳೆ.

"ಹೂಂ ನನಗೇನೂ ಹಳೆಯ ಪದ್ಧತಿ ಸರಿಹೋಗೋದಿಲ್ಲಮ್ಮ, ಹುಡುಗೀಗೆ ಅಲಂಕಾರ ಮಾಡಿ ಹುಡುಗನಿಗೆ ತೋರಿಸೋದು ಇವೆಲ್ಲಾ ತೀರಾ ಅನಾಗರಿಕತೆಗೆ ಸೇರಿದ್ದು. ವಯಸ್ಸಿಗೆ ಬಂದ ಹುಡುಗಿಯನ್ನು ಸೌಂದರ್ಯ ಪ್ರದರ್ಶನಕ್ಕೆ ಕೂರಿಸಿದಾಗ ಅವಳು ನೊಂದುಕೊಳ್ಳುವುದಿಲ್ಲವೆ? ಈ ರೀತಿಯ ವಧುಪರೀಕ್ಷೆಯಿಂದ ಹುಡುಗಿಯ ರೂಪ ಗೊತ್ತಾಗುತ್ತದೆಯೇ ಹೊರತು ಗುಣ ಏನು ತಿಳಿಯುತ್ತದೆ? ಆದುದರಿಂದ ಪ್ರೇಮವಿವಾಹವೇ ಸರಿ. . ."

"ನಮ್ಮಲ್ಲಿ ಆದಕ್ಕೆ ಅವಕಾಶವೇ ಇಲ್ಲವಲ್ಲಾ" ರಮಾ ರಾಗ ಎಳೆದಳು.

"ಅದು ನಿಜಾನಮ್ಮ, ನಮ್ಮ ಜನ ಇನ್ನೂ ಮುಂದುವರಿಯಬೇಕು. ಯುವಕ ಯುವತಿಯರಿಗೆ ಸಲಿಗೆಯಿಂದಿರುವ ಅವಕಾಶ ಕಲ್ಪಿಸಿಕೊಡಬೇಕು. ಆಗ ಹುಡುಗ ಹುಡುಗಿ ಪರಸ್ಪರ ಮೆಚ್ಚಿ ತಾವೇ ಮದುವೆಯಾಗುತ್ತಾರೆ. ಇದರಿಂದ ತಂದೆತಾಯಿಯರ ಜವಾಬ್ದಾರಿಯೂ ಕಡಿಮೆಯಾಗುತ್ತದೆ."

ರಮಾ ನಗುತ್ತಾ "ನಿನ್ನ ಯೋಚನೆಯೇನೋ ಚೆನ್ನಾಗಿದೆ. ಆದರೆ ನಮ್ಮ ಕಡೆ ಹುಡುಗ ಹುಡುಗಿಯರು ಪರಸ್ಪರ ಪರಿಚಿತ ಹಾಗೋದಕ್ಕೆ ಅವಕಾಶ ಎಲ್ಲಿದೆ? ಪಾಶ್ಚಿಮಾತ್ಯ ದೇಶದಲ್ಲಿ ಪಾರ್ಟಿಗಳು, ನೃತ್ಯಕೂಟಗಳು, ವಿಹಾರಕೂಟಗಳು, ಕ್ಲಬ್ಬುಗಳು, ಆಫೀಸುಗಳು ಈ ಉತ್ಸವಗಳಿಂದಾಗಿ ಪರಸ್ಪರ ಪರಿಚಿತರಾಗುತ್ತಾರೆ. ನಮ್ಮ ಕಡೆ ಅದಕ್ಕೆ ಅವಕಾಶವೇ ಇಲ್ಲವಲ್ಲಾ?"

"ನೀನೇ ಮೇಲ್ಪಂಕ್ತಿ ಹಾಕಿಬಿಡು, ನಾವೆಲ್ಲಾ ನಿನ್ನನ್ನು ಹಿಂಬಾಲಿಸುತ್ತೇವೆ ಎಂದಳು.

"ಅಷ್ಟೊಂದು ಧೈರ್ಯ ನನಗಿದ್ದಿದ್ದರೆ ನಾನು ಎಂದೋ ಮದುವೆಯಾಗಿರುತ್ತಿದ್ದೆ. ನನಗೆ ಧೈರ್ಯವೂ ಇಲ್ಲ. ಈ ಬಗೆಯ ಜೀವನವೂ ಇಷ್ಟವಿಲ್ಲ. ನಾವು ಹುಟ್ಟಿರೋದು ಕೇವಲ ಬಿ.ಎ. ಪಾಸು ಮಾಡಿ ಮನೇಲಿ ಕುಳಿತುಕೊಳ್ಳಕ್ಕೇನೆ ರಮಾ. . . (ಪು.೭೯).

ಈ ಮಾತುಗಳು ರಮಾ ಸಾಂಪ್ರದಾಯಿಕ ಹಾಗೂ ಆಧುನಿಕತೆಗಳು ನಡುವೆ ಸಿಕ್ಕಿ ತೊಳಲಾಡುವ ಪ್ರಸ್ತುತದಲ್ಲಿಯೂ ಹೆಚ್ಚು ಮಹತ್ವವಾಗಿರುವ ಹೆಣ್ಣುಗಳ ಪರವಾಗಿ ಈ ಅಭಿಪ್ರಾಯಗಳನ್ನು ವ್ಯಕ್ತಪಡಿಸುತ್ತಾಳೆ. ಆದರೆ ಅಮೃತ ವಿವಾಹದಲ್ಲಿ ಕಾಣದ ಯಶಸ್ಸನ್ನು ತನ್ನ ಉದ್ಯೋಗದಲ್ಲಿ ತೃಪ್ತಿ ಪಡೆದುಕೊಳ್ಳುತ್ತಾಳೆ.

ವಿವಾಹವೆಂಬ ಸಾಮಾಜಿಕ ಸಂಸ್ಥೆಯನ್ನು ಎದುರಿಸಿ ಆದರಲ್ಲಿ ಒಂದಲ್ಲಾ ಒಂದು ಕಾರಣಕ್ಕೆ ಸೋಲುವವರೇ ಹೆಚ್ಚು. ಹಾಗೆ ಇಲ್ಲಿ ಆರು ಜನ ಗೆಳತಿಯರಲ್ಲಿ ಮಡ್ವುಎಯೆಂಬ ಹೋರಾಟದಲ್ಲಿ ಯಶಸ್ವಿಯಾಗುವವಳು ಅಂಬಿಕಾ ಒಬ್ಬೇ ಅವಳ ಬದುಕಿನಿಂದ ಹೆಚ್ಚೇನು ಮಹತ್ವಕಾಂಕ್ಷೆ ಹೊಂದದವಳು. ಆದರೆ ಉಳಿದವರು ವಿವಾಹದಲ್ಲಿ ಕಾಣದ ಯಶಸ್ಸನ್ನು ಉದ್ಯೋಗವನ್ನು ದೊರಕಿಸಿಕೊಂಡ ಬದುಕಿನಲ್ಲಿ ತಮ್ಮದೇ ಆದ ನೆಲೆಯನ್ನು ಕಂಡುಕೊಳ್ಳುತ್ತಾರೆ.

'ಕಂಕಣ'ದಲ್ಲಿ ಬದುಕಿನ ಹುಡುಕಾಟವಾಗಿ ಮುಕ್ತಿಯಲ್ಲಿ ನೆಲೆ ಕಾಣದ ಆರು ಜನರ ಬದುಕು ಒಂದು ಹಂತಕ್ಕೆ ಬಂದು ನಿಲ್ಲುವುದು ಮುಕ್ತಿಯಲ್ಲಿ. ತಮ್ಮ ಸಮಸ್ಯೆಗಳಿಂದ ಒಂದೊಂದು ರೀತಿಯಲ್ಲಿ ಒಬ್ಬರು ಮುಕ್ತಿಯನ್ನು ಕಂಡುಕೊಳ್ಳುತ್ತಾರೆ. ತನ್ನ ಕುಟುಂಬ ರಕ್ಷಣೆಗಾಗಿ ಕುರುಡನೊಬ್ಬನನ್ನು ಮದುವೆಯಾಗುವ ರಮಾ ಆನಂತರ ನಿಧಾನವಾಗಿ ತನ್ನ ಗಂಡನಿಗೆ ತನ್ನ ಬಗ್ಗೆ ಇರುವ ಅಭಿಮಾನ ಹಾಗೂ ಅವನ ಹೃದಯ ವೈಶಾಲನದಿಂದಾಗಿ ಅವನನ್ನು ಪ್ರೀತಿಸಲು ಪ್ರಾರಂಭಿಸುತ್ತಾಳೆ. ತನಗೊಂದು ಸುಂದರ ಮಗುವಾದ ನಂತರವಂತೂ ತನ್ನ ದಾಂಪತ್ಯ ಜೀವನವನ್ನು ತೃಪ್ತಳಾಗುತ್ತಾಳೆ.

ತನ್ನ ಸಂಗೀತದ ಮೇಷ್ಟರೊಡನೆ ಓಡಿ ಹೋಗುವ 'ವಲ್ಲಿ', ಸ್ವಲ್ಪ ಕಾಲದಲ್ಲಿಯೇ ತನ್ನ ದುಡುಕಿಗೆ ಪಶ್ಚಾತ್ತಾಪ ಪಡುತ್ತಾ, ತಾನೇ ಒಂದು ಕೆಲಸವನ್ನು ಹುಡುಕಿಕೊಳ್ಳುತ್ತಾಳೆ. ಅವಳ ಗಂಡನು ತನ್ನ ಖರ್ಚಿಗೆ ಅವಳನ್ನೇ ಆಶ್ರಯಿಸಬೇಕಾಗುವುದ್ದರಿಂದ ಅವನ ವರ್ತನೆಯೂ ಸುಧಾರಿಸುತ್ತದೆ. ತಾನು ಅವನತಿಯ ಹಾದಿಯಲ್ಲಿ ಬಹುವೇಗದಿಂದ ಸಾಗುತ್ತಿದ್ದೇನೆಂಬ ಅರಿವಿದ್ದರೂ, ತನ್ನ ದೇಹವನ್ನು ಬೇಕಾದವರೊಡನೆ ಮಾರಿಕೊಳ್ಳುತ್ತಾ ಸದ್ಯದಲ್ಲಿ ಸುಖದಿಂದಿದ್ದು ಬೇರೆಲ್ಲವನ್ನೂ ಮರೆಯಲು ಸುಶೀಲ ಪ್ರಯತ್ನಿಸುತ್ತಾಳೆ. ಉಳಿದವರೆಲ್ಲರಿಗಿಂತಲೂ ಅದೃಷ್ಟವಂತೆ ಅಂಬಿಕಾ ತನ್ನೆರಡು ಮುದ್ದು ಮಕ್ಕಳೊಡನೆ ಸುಖದಿಂದ ಸಂಸಾರ ಸಾಗಿಸುತ್ತಾಳೆ. ಉದ್ಯೋಗಸ್ತೆಯಾದ ಅಮೃತ ಮದುವೆಯಾಗಿದ್ದ ಹೆಂಡತಿ ಅನಾರೋಗ್ಯದಿಂದ ಸಾಯುವ ಸ್ಥಿತಿಯು ಗಂಡನನ್ನು ಪ್ರೀತಿಯ ಅವನ ಹೆಂಡತಿ ಸತ್ತರ ಅವನೊಂದಿಗೆ ಮದುವೆಯಾಗುವ ನಿರೀಕ್ಷೆಯಲ್ಲಿ ಇವರ ಬದುಕಿನಲ್ಲಿ ಮುಕ್ತಿಯನ್ನು ಕಂಡುಕೊಳ್ಳುತ್ತಾರೆ.

ಪುರುಷ ಕೇಂದ್ರಿತ ಸಮಾಜದಲ್ಲಿ ಹೆಣ್ಣಿನ ಸ್ಥಿತಿ ತ್ರಿಶಂಕುಸ್ಥಿತಿ ಸಂಪ್ರದಾಯಕ್ಕೆ ಸಂಪೂರ್ಣ ಬದ್ಧವಾಗಲು ಸಾಧ್ಯವಿಲ್ಲ. ಅದನ್ನು ಮುರಿದು ತಮ್ಮ ಅಸ್ತಿತ್ವವನ್ನು ಉಳಿಸಿಕೊಳ್ಳುವುದು ಕಷ್ಟ. ಸಾಧ್ಯವಾದ ಮಟ್ಟಿಗೆ ಇಲ್ಲಿನ ಹೆಣ್ಣುಗಳು. ಸಂಪ್ರದಾಯ ಮೀರುವ ಪ್ರಯತ್ನ ಮಾಡಿದ್ದಾರೆ. ಉದಾಹರಣೆಗೆ, ವೇದವಲ್ಲಿ ತಂದೆ-ತಾಯಿಯನ್ನು ವಿರೋಧಿಸಿ ಕ್ರಿಶ್ಚಿಯನ್ ಗಂಡಿನೊಂದಿಗೆ ಓಡಿ ಹೋಗುತ್ತಾಳೆ. ಆದರೂ ಹೆಣ್ಣಿನ ಇಬ್ಬಂದಿತನ ತೊಳಲಾಟಕ್ಕೆ ಇಲ್ಲಿನ ಎಲ್ಲ ಹೆಣ್ಣುಗಳ ಅನುಭವಿಸುತ್ತಾರೆ. ಉದಾಹರಣೆಗೆ, ಅಂಬಿಕಾಳಿಗೆ ಆಸ್ತಿಯಿದೆ ಮತ್ತು ಅವಳು ವಿದ್ಯಾವಂತೆ. ಆದರೂ ಅವಳನ್ನು ಮದುವೆಯಾಗುವವ ಅವಳನ್ನು ನೋಡಿ, ತೂಗಿ ಒಪ್ಪಬೇಕು ಒಪ್ಪಿಗೆಯ ನಂತರವೂ ಅವಳನ್ನು ಮದುವೆಯಾಗಲು ಅವನಿಗೆ ದೊಡ್ಡ ಮೊತ್ತದ ವರಕ್ಷಿಣೆಯನ್ನು ಕೊಡಬೇಕು. ಕಸ್ತೂರಿಯ ವಿಷಯಕ್ಕೆ ಬಂದರೆ ತರುಣನೊಬ್ಬನು ಅವಳನ್ನು ಮೆಚ್ಚಿ ವರದಕ್ಷಿಣೆಯಿಲ್ಲದೆ ಮದುವೆಯಾಗಲೂ ಸಿದ್ಧವಾಗುತ್ತಾನೆ. ಆದರೆ ಆ ಹುಡುಗನ ಮಾತಾಪಿತೃಗಳು ಈ ಸಂಬಂಧವನ್ನು ಒಪ್ಪುವುದಿಲ್ಲ. ಏಕೆಂದರೆ ಕಸ್ತೂರಿಯ ಜಾತಕದಲ್ಲಿ ಒಂದು ದೋಷವಿದೆ. ಅವಳನ್ನು ಮದುವೆಯಾಗುವವನು ಬೇಗನೇ ಸಾಯುತ್ತಾನೆ ಎಂಬ ನಂಬಿಕೆಯಿಂದಾಗಿ, ಕೆಲವು ಗಂಡುಗಳು ತುಂಬಾ ಓದಿದ್ದಾಳೆಂದು ಅಮೃತಾಳನ್ನು ಒಪ್ಪದೇ ಹೋದರೆ ಮತ್ತೆ ಕೆಲವರು ಅವಳಿಗೆ ಸಂಗೀತವು ಗೊತ್ತಿಲ್ಲವೆಂದು ತಿರಸ್ಕರಿಸುತ್ತಾರೆ. ಜಾತಕಗಳು ಹೊಂದುವುದಿಲ್ಲವೆಂದು ಮತ್ತೆ ಕೆಲವರು ಅವಳನ್ನು ಒಪ್ಪುವುದಿಲ್ಲ. ವೇದವಲ್ಲಿ ಸಂಗೀತ ಕಲಿತಿದ್ದಾಳೆ, ಓದಿದ್ದಾಳೆ. ಆದರೆ ಅವಳ ಬಣ್ಣ ಕಪ್ಪಾದುದರಿಂದ ಅವಳಿಗೆ ಮದುವೆಯಾಗುವುದು ಕಷ್ಟ. ಇಂತಹ ಸ್ತ್ರೀಯರ ಮೂಲಕ ತ್ರಿವೇಣಿ ಹೇಗೆ ಆಧುನಿಕ ಸ್ತ್ರೀಯರು ಇಂದು ಒಂದು ಅಸಾಧ್ಯ ಹಾಗು ಅಸಂಬದ್ಧ ಪ್ರಪಂಚದಲ್ಲಿ ಬದುಕಬೇಕಾಗಿದೆಯೆಂಬುದು ಪ್ರಸ್ತುತವು ಕೂಡ ಆಗಿದೆ.

ಏಕಪಕ್ಷೀಯ ಸಾಮಾಜಿಕ ವ್ಯವಸ್ಥೆಯಲ್ಲಿ ವಿವಾಹ ಕೂಡ ಪುರುಷಪರವಾದ ನಿರ್ಧರಿಸಲ್ಪಟ್ಟ ನಿಯಮ ಧೋರಣೆಗಳನ್ನು ತ್ರಿವೇಣಿಯವರು ಖಂಡಿಸುತ್ತಾರೆ. ಸ್ತ್ರೀಯನ್ನು 'ನೋಡಿ ಪರೀಕ್ಷಿಸಿ' ಆಯ್ಕೆ ಮಾಡುವವನು ಗಂಡು-ಹೆಣ್ಣಾದರೋ ನಿಷ್ಕ್ರಿಯವಾಗಿದ್ದು ಆರಿಸಲ್ಪಡುವವಳು. ಅನೇಕ ಗಂಡುಗಳು ಅಮೃತಾಳ ವಧುಪರೀಕ್ಷೆಯನ್ನು ನಡೆಸುತ್ತಾರೆ ಮತ್ತು ಅನಂತರ ನಾನಾ ಕಾರಣಗಳಿಂದಾಗಿ ಅವಳನ್ನು ತಿರಸ್ಕರಿಸುತ್ತಾರೆ. ಅವಳ ಬಣ್ಣ ಕಪ್ಪು ವರನಿಗೆ ಮದುವೆಯಾಗಲಿರುವ ತಂಗಿಯೊಬ್ಬಳಿದ್ದಾಳೆ. ಮಾವನ ಖರ್ಚಿನಲ್ಲಿ ತಾನು ವಿದೇಶಕ್ಕೆ ಹೋಗಿ ಓದಬೇಕು. . . ಇತ್ಯಾದಿ. ಕಾರಣಗಳಿಗಾಗಿ ಗಂಡು ಹೇಗೆ ಇರಲಿ, ಅವನ ಬಣ್ಣ ಬಿಳಿಯಿರಲು ಕಪ್ಪಿರಲಿ, ಅವನು ಕುರೂಪಿಯಿರಲಿ ಅಥವಾ ಸುಂದರವಾಗಿರಲಿ, ಹೆಣ್ಣಿಗೆ ತನ್ನನ್ನು ಮದುವೆಯಾಗುವವನ ವಿಷಯದಲ್ಲಿ

ಯಾವ ರೀತಿಯ ಆಯ್ಕೆಯ ಸ್ವಾತಂತ್ರ್ಯವೂ ಇಲ್ಲ. ಆದರೆ ಸ್ವತಃ ಕಪ್ಪುಬಣ್ಣದವನಾಗಿದ್ದು ಕುರೂಪಿಯಾಗಿರುವ ಗಂಡೂ ತನ್ನ ಹೆಂಡತಿ ಸುರಸುಂದರಿಯಾಗಿರಬೇಕೆಂದೇ ಅಪೇಕ್ಷಿಸುತ್ತಾನೆ. ಒಮ್ಮೆ ಆರು ಮಕ್ಕಳಿರುವ ವಿಧುರನೊಬ್ಬನು ತನ್ನ ಅರ್ಧ ವಯಸ್ಸು ಆಗಿಲ್ಲದ ಅಮೃತಾಳನ್ನು ಮದುವೆಯಾಗುವುದು ತನ್ನ ಹಕ್ಕೆಂದು ವಾದಿಸುತ್ತಾನೆ.

ಹೆಂಡತಿಯಿಂದ ಕಾಯಾ, ವಾಚಾ, ಮನಸಾ, ಸಂಪೂರ್ಣ ಪತಿನಿಷ್ಠೆಯನ್ನು ಗಂಡನು ಅಪೇಕ್ಷಿಸುತ್ತಾನೆ ಮತ್ತು ಅಂತಹ ನಿಷ್ಠೆಯನ್ನು ಅವಳ ಮೇಲೆ ಹೇರುತ್ತಾನೆ. ಆದರೆ ಅದೇ ನಿಷ್ಠೆಯನ್ನು ಗಂಡನಿಂದ ಅಪೇಕ್ಷಿಸುವ ಯಾವ ಹಕ್ಕೂ ಹೆಂಡತಿಗಿಲ್ಲ. ಈ ವಿಧದ ಪಕ್ಷಪಾತವನ್ನು ತ್ರಿವೇಣಿ ವಿರೋಧವನ್ನು ಕೆಲವು ಹೆಣ್ಣುಗಳಲ್ಲಿ ವ್ಯಕ್ತಪಡಿಸಿದ್ದಾರೆ.

ಸ್ತ್ರೀಯನ್ನು ಸಂಪೂರ್ಣ ಪರಾವಲಂಬಿಯನ್ನಾಗಿ ಮಾಡುವ ಇಂತಹ ಪುರುಷನಿರ್ಮಿತ ವಿವಾಹ-ವ್ಯವಸ್ಥೆಯಿಂದ ಸ್ತ್ರೀ ಪಾರಾಗುವ ಮಾರ್ಗಗಳನ್ನು ಇಲ್ಲಿನ ಕೆಲವು ಹೆಣ್ಣುಗಳು ಕಂಡುಕೊಳ್ಳುತ್ತಾರೆ. ಶಿಕ್ಷಣ, ಹಾಗೂ ಆರ್ಥಿಕ ಸ್ವಾತಂತ್ರ್ಯ ಇವೆರಡು ಪರಿಹಾರಗಳನ್ನು ವಲ್ಲಿ ಮತ್ತು ಅಮೃತಾ ಕಂಡುಕೊಳ್ಳುತ್ತಾರೆ. ಆರ್ಥಿಕವಾಗಿ ಸ್ತ್ರೀ ಪುರುಷನ ಅಧೀನವಾಗಿರುವ ತನಕ ಭಾವನಾತ್ಮಕವಾಗಿಯೂ ಅವಳು ಅವನನ್ನೇ ಅವಲಂಬಿಸಬೇಕಾಗುತ್ತದೆ. ಒಮ್ಮೆ ಅವಳು ಆರ್ಥಿಕ ನೆಲೆಯಲ್ಲಿ ಸ್ವತಂತ್ರಳಾಗಿ ತನ್ನ ಪೋಷಣೆಯನ್ನು ತಾನೇ ಮಾಡಿಕೊಳ್ಳುವ ಸ್ಥಿತಿಗೆ ಬಂದಾಗ ಸ್ವಲ್ಪವಾದರೂ ಅವಳು ಪುರುಷನ ದಬ್ಬಾಳಿಕೆಯಿಂದ ಮುಕ್ತಳಾಗಬಹುದು. ವಲ್ಲಿ ಸ್ವತಃ ಸಂಪಾದಿಸಲು ಪ್ರಾರಂಭಿಸಿ ಅವಳ ಗಂಡನು ತನ್ನ ಖರ್ಚು ವೆಚ್ಚಗಳಿಗೆ ಅವಳನ್ನೇ ಅವಲಂಬಿಸಬೇಕಾಗುವ ಅವನು ವಲ್ಲಿಯನ್ನು ಗೌರವಿಸಲು ಹಾಗೂ ಅವಳಿಗೆ ವಿಧೇಯನಾಗಿರಲು ಪ್ರಾರಂಭಿಸುತ್ತಾನೆ. ಅಂತೆಯೇ, ಅಮೃತಾ ಮುಂಬಯಿಗೆ ಹೋಗಿ, ಒಂದು ಕೆಲಸವನ್ನು ಸಂಪಾದಿಸಿ, ದುಡಿಯಲು ಪ್ರಾರಂಭಿಸಿದ ಕೂಡಲೇ ಅವಳಿಗೆ ಆತ್ಮವಿಶ್ವಾಸವುಂಟಾಗುತ್ತದೆ. ಇತರ ಗಂಡಸರೊಡನೆ ಯಾವ ಸಂಕೋಚವೂ ಇಲ್ಲದೆ ಸಮಾನವಾಗಿ ಮಾತನಾಡಲು ಕಲಿಯುತ್ತಾಳೆ.

ಬದಲಾಗುತ್ತಿರುವ ಸಮಾಜದಲ್ಲಿ ಪರಿಸ್ಥಿತಿಗಳ ಒತ್ತಡದಲ್ಲೂ ಬದುಕಿಗೆ ಹೊಂದಿಕೊಂಡು ತಮ್ಮದೇ ಆದ ಅಸ್ತಿತ್ವವನ್ನು ಉಳಿಸಿಕೊಳ್ಳಲು ಭಿನ್ನ ನೆಲೆಗಳಲ್ಲಿ ಸಮಸ್ಯೆಗೆ ಪರಿಹಾರಕಂಡುಕೊಳ್ಳುವ ಒಬ್ಬರು ವಿಶಿಷ್ಟ ಹೆಣ್ಣುಗಳಾಗಿ ಕಂಡುಬರುತ್ತಾರೆ.

ಹೆಣ್ಣಿನ ವಿವಾಹಪೂರ್ವದ ಕನಸುಗಳು, ಮಧುರ ದಾಂಪತ್ಯದ ಕನಸು ಹೊತ್ತ ಅವರಲ್ಲಿನ ಬೆಳದಿಂಗಳಿದೆಯೆಂಬ ಭ್ರಮೆಯನ್ನು ಒಡೆದು ಪ್ರಸ್ತುತತೆಯನ್ನು ವಾಸ್ತವ ನೈಜತೆಯನ್ನು ಕೆಲವು ಹೆಣ್ಣುಗಳಲ್ಲಿ ತೋರಿಸಿದ್ದಾರೆ. ವೈವಾಹಿಕ ಚೌಕಟ್ಟಿನೊಳಗಿನ ಕ್ರೌರ್ಯವನ್ನು ವಿಶದವಾಗಿ ಹಿಡಿಯುವ ಪ್ರಯತ್ನ ಮಾಡಿದವರಲ್ಲಿ ತ್ರಿವೇಣಿಯವರೇ ಮೊದಲಿಗರೆಂದು ಹೇಳಬಹುದು. ಅದು ಕೀಲುಗೊಂಬೆಯಲ್ಲಿ ವ್ಯಕ್ತವಾಗಿದೆ ಇಲ್ಲಿನ ನಾಯಕಿ ಸೀತ ಕಾದಂಬರಿಯ ಹೆಸರಿನಲ್ಲಿಯೇ ಕೌಟುಂಬಿಕ ಚೌಕಟ್ಟಿನೊಳಗೆ ಅವಳಿಗಿರುವ ಸ್ಥಾನವನ್ನು ಸೂಚಿಸುತ್ತದೆ. ಸೀತ ಗಂಡನ ಕ್ರೌರ್ಯಕ್ಕೆ ಮದುವೆಯ ದಿನದಿಂದ ಹಿಡಿದು ಸಾಯುವ ದಿನದವರೆಗೂ  ಒಳಗಾಗುತ್ತಾಳೆ. ಕೊನೆಗೆ ಆ ಕ್ರೌರ್ಯವೇ ಅವಳ ಪ್ರಾಣವನ್ನೂ ನುಂಗುತ್ತದೆ. ಆದರೆ ಈ ಕ್ರೌರ್ಯದ ವಿರುದ್ಧ ದನಿಯೆತ್ತುವ, ಪಾರಾಗುವ ಯಾವ ಪ್ರಯತ್ನವನ್ನೂ ಧೈರ್ಯವನ್ನು ತೋರುವುದಿಲ್ಲ. ನಮ್ಮ ಸಾಮಾಜಿಕ ವ್ಯವಸ್ಥೆಯು ಆ ಧೈರ್ಯವನ್ನು ಬೆಳೆಸಿಕೊಳ್ಳುವ ವಾತಾವರಣ ನಿರ್ಮಾಣವಾಗಿಲ್ಲ. ಪುರುಷ ಪ್ರಧಾನ ವ್ಯವಸ್ಥೆಯಲ್ಲಿ ಹೆಣ್ಣನ್ನು ಬೆಳೆಸುವ ಬಗ್ಗೆ ಮತ್ತು ಹೆಣ್ಣಿನ ಸ್ಥಾನಮಾನಗಳ ಬಗ್ಗೆ ಅರ್ಥಪೂರ್ಣ ಒಳನೋಟಗಳನ್ನು ಸೀತಾಳ ಮೂಲಕ ನೋಡಬಹುದು.

ಬಾಲ್ಯದಿಂದಲೇ ಹೆಣ್ಣು ತನ್ನದೇ ಆದ ಸ್ಥಾನ, ಪಾತ್ರವನ್ನು ಕುಟುಂಬ ಹಾಗೂ ಸಮಾಜದಲ್ಲಿ ಸಹಜವಾಗಿ ಒಪ್ಪಿಕೊಂಡುಬಿಡುವಂತೆ ಹೇಗೆ ಅವಳನ್ನು ಬೆಳೆಸಲಾಗುತ್ತದೆ ಎಂಬುದನ್ನು ತ್ರಿವೇಣಿ ಅತ್ಯಂತ ಸೂಕ್ಷ್ಮವಾಗಿ ದಾಖಲಿಸಿದ್ದಾರೆ. ಹೆಣ್ಣು ಯಾವಾಗಲೂ ಪತಿಯ ಅಧೀನಳಾಗಿರಬೇಕು. ಚಿಕ್ಕ ವಯಸ್ಸಿನಲ್ಲಿಯೇ ಗಂಡಿಗೆ ಹೊರಗೆ ಹೋಗಿ ಸ್ವತಂತ್ರವಾಗಿ, ಧೈರ್ಯದಿಂದ ಮುನ್ನುಗ್ಗಲು ಪ್ರೋತ್ಸಾಹಿಸಿದರೆ ಹೆಣ್ಣಿಗೆ ಸಹನೆ, ಪರಾವಲಂಬನೆ ಮತ್ತು ವಿಧೇಯತೆ ಮುಂತಾದ ಗುಣಗಳನ್ನು ಕಲಿಸಲಾಗುತ್ತದೆ. ಹೆಣ್ಣಾದುದರಿಂದ ಸೀತಾಳಿಗೆ ಯಾವಾಗಲೂ ನೀಡುವ ಉಪದೇಶ ಇದು.

"ಹೆಂಗಸಿಗೆ ಗಂಡನೇ ದೇವರು ಗಂಡನ ಸೇವೆ ಮಾಡುವುದೇ ಹೆಂಗಸಿನ ಧರ್ಮ. ಪತಿಯೇ ಪರದೈವ" ಇಂತಹ ಮಾತುಗಳು ಮದುವೆಯಾದ ನಂತರ ಗಂಡನ ಬಳಿಗೆ ರಾತ್ರಿ ಹೋಗಲು ತುಂಬಾ ಹೆದರುತ್ತಿದ್ದ ಸೀತೆಗೆ ಅವಳ ತಾಯಿ ಹೀಗೆ ಬುದ್ಧಿವಾದ ಹೇಳುತ್ತಾಳೆ.

ಸೀತು, ಗಂಡಾದ್ರೆ ಪ್ರತ್ಯಕ್ಷ ದೇವರು. ತಿಳಿಯಿತೇ?

"ಹೂಂ"

"ಮತ್ತೇ ನಿನ್ನ ಗಂಡ ಹೇಳಿದ ಹಾಗೆ ಕೇಳು ಮೊಂಡತನ, ಹಠ ಮಾಡಬೇಡ"

"ನಾನು ಯಾವಾಗಲಾದರೂ ಹಟ ಮಾಡಿರೋದನ್ನು ನೀನು ನೋಡಿದೀಯಾಮ್ಮ?

ಸೀತೆಗೆ ತಾಯಿಯ ಮಾತುಗಳು ಅರ್ಥವಾಗಿರಲಿಲ್ಲ.

"ಆದರೂ ಗಂಡನ ಮಾತಿಗೆ ಎದುರಾಡಬೇಡ. ಗಂಡನ ಸೇವೆಯಿಂದ ದೇವರನ್ನು ಮೆಚ್ಚಿಸಬಹುದು. ಹೆಣ್ಣಿಗೆ ಪತಿಯೇ ಪ್ರತ್ಯಕ್ಷ ದೈವ ಅನ್ನೋದನ್ನ ಮರೆಯಬೇಡ."(ಪು.೩೯–೪೦).

ಇಂತಹ ತರಬೇತಿ ಹಾಗೂ ಬೋಧನೆಯನ್ನು ಪಡೆದ ಸೀತ ಗಂಡನ ಕೋಣೆಯನ್ನು ಪ್ರವೇಶಿಸಿದ ಕೂಡಲೇ ಅವನ ಕ್ರೂರ ಆಕ್ರಮಣಕ್ಕೊಳಗಾಗುತ್ತಾಳೆ. ಭೀತಿಯಿಂದ ಗಡಗಡನೆ ನಡಗುವ ಸೀತಾ ರಾತ್ರಿಯಲ್ಲಿ ಕೋಣೆಯಿಂದ ಹೊರಗೋಡಿ ಬಂದು ತಾಯಿಯ ಬಳಿ ಮಲಗುತ್ತಾಳೆ. ಈ ಸಂಗತಿಯನ್ನು ಕೇಳಿದ ನರಸಿಂಹಯ್ಯನ ತಾಯಿ ತನ್ನ ಅನುಭವವನ್ನು ಸ್ಮರಿಸುತ್ತಾಳೆ. 'ಮೊದಲ ರಾತ್ರಿ ನಾನೂ ಹಠ ಮಾಡಿ ಯಜಮಾನರಿಂದ ಹೊಡೆತ ತಿಂದಿದ್ದೆ. ಆಗ ನನ್ನ ಬಳೆಗಳೆಲ್ಲಾ ಒಡೆದು ಹೋಗಿದ್ದವು" (ಪು.೪೮).

ಇದರಿಂದ ಪೀಳಿಗೆಯಿಂದ ಪೀಳಿಗೆಗೆ ಸ್ತ್ರೀಯರೊಡನೆ ಇದೇ ರೀತಿ ಅಮಾನುಷ ರೀತಿಯಲ್ಲಿ ವರ್ತಿಸಲಾಗುತ್ತದೆ. ಎಲ್ಲಿ ಮತ್ತು ಎಂದು ಇಂತಹ ಲಿಂಗಬೇಧವ್ವನಾಧರಿಸಿದ ಪಕ್ಷಪಾತಕ್ಕೆ ಪರಿಹಾರಗಳನ್ನು ಇಲ್ಲಿ ಬರುವ ಮತ್ತೊಂದು ಹೆಣ್ಣಿನ ಮೂಲಕವಾಗಿದೆ. ಕೇವಲ ಶಿಕ್ಷಣವೊಂದೇ ಮತ್ತು ಅದರಿಂದ ದೊರಕುವ ಆರ್ಥಿಕ ಸ್ವಾತಂತ್ರ್ಯ ಹೆಣ್ಣಿಗೆ ಪರಾಧೀನತೆಯಿಂದ ಮುಕ್ತಿ ಕೊಡಬಲ್ಲದು. ಮಧುರವಾಣಿಯಂತೆ. ಉಳಿದ ಹೆಣ್ಣುಗಳಿಗೂ ಉತ್ತಮ ಶಿಕ್ಷಣ ದೊರೆತರೆ, ಆಗ ಅವಳು ಪುರುಷರು ಅವಳಿಗಾಗಿ ಕಟ್ಟಿ ಬೆಳೆಸಿರುವ ವ್ಯವಸ್ಥೆಯ ಮರ್ಮವನ್ನು ಅರಿತು ಅದರಿಂದ ಪಾರಾಗುವ ಸಾಮರ್ಥ್ಯವನ್ನು ಪಡೆಯಬಹುದು.

ಆಸ್ಪತ್ರೆಯಲ್ಲಿ ಸಮಾಜದ ವಿವಿಧ ಸ್ತರಗಳಿಂದ ಒಂದು ಒಂದಲ್ಲಾ ಒಂದು ಬಗೆಯಲ್ಲಿ ಪುರುಷರಿಂದಲೇ ಶೋಷಣೆಗೆ ಒಳಗಾಗಿ ತಮ್ಮ ಬದುಕನ್ನು ದುರಂತವಾಗಿಸಿಕೊಂಡ ಹೆಣ್ಣುಗಳನ್ನು ಕುರಿತು ಮದುರವಾಣಿ ಹೇಗೆ ಹೇಳುತ್ತಾಳೆ. "ಚಿಕ್ಕ ವಯಸ್ಸಿನಲ್ಲಿ ಗಂಡ ಸತ್ತರೆ ಮದುವೆ ಮಾಡ್ಕೋಬಾರ್ದು ಹೆಣ್ಣು ಅಂತ ಕಾನೂನು ಮಾಡಿರುವ ಸಮಾಜದ ತಪ್ಪು. ಆ ಸಮಾಜನ ಎದುರಿಸಿ ಅನಾಥೆಯನ್ನು ಸೌಭಾಗ್ಯವತಿಯನ್ನಾಗಿ ಮಾಡಲು ಓಂಜರಿಯುವ ಹೇಡಿ ಗಂಡಸಿನ ತಪ್ಪು. ಗಂಡಸು ಇನ್ನೂ ಮೃಗವಾಗಿಯೇ ಇದ್ದಾನೆ ಎನ್ನುವುದಕ್ಕೆ ನಿಮ್ಮ ಈಗಿನ ಸ್ಥಿತಿಯೇ ಸಾಕ್ಷಿ" (ಪು.೧೬೦).

"ವಿದ್ಯೆ ಅವಳಿಗೊಂದು ರಕ್ಷಣೆಯಿದ್ದ ಹಾಗೆ ಬ್ಯಾಂಕಿನಲ್ಲಿ ಹಣ ಕೂಡಿಟ್ಟುಕೊಂಡು ಕಷ್ಟ ಕಾಲಕ್ಕೆ ಅದನ್ನು ಉಪಯೋಗಿಸಿಕೊಳ್ಳುವ ಹಾಗೆ, ಕಷ್ಟದಲ್ಲಿರುವಾಗ ವಿದ್ಯೆಯ ಉಪಯೋಗ ಪಡೆಯಬಹುದು. ವಿದ್ಯಾವಂತರಾಗಿದ್ದರೆ ಕೆಲಸ ಮಾಡಬೇಕೂಂತಾನೇ ಏನೂ ಇಲ್ಲ. ಆದರೆ ಕಾಲ ಒಂದೇ ಸಮ ಇರುವುದಿಲ್ಲ. ಏನಾದರೂ ಹೆಚ್ಚು ಕಮ್ಮಿಯಾದರೆ ವಿದ್ಯೆ ಹೆಂಗಸನ್ನು ಕಾಪಾಡುತ್ತೆ. ನೀವಂತೂ ಓದಲಿಲ್ಲ. ನಿಮ್ಮ ಹೆಣ್ಣು ಮಕ್ಕಳಿಗೆ ಮದುವೆ ಮಾಡದಿದ್ದರೂ ಚಿಂತೆಯಿಲ್ಲ. ಅವರನ್ನು ವಿದ್ಯಾವಂತರನ್ನಾಗಿ ಮಾಡಿ" ಎಂದು ಮಧುರವಾಣಿ ಹೇಳುತ್ತಾಳೆ (ಪು.೧೪೭)

ಸೀತಾ ಇಲ್ಲಿ ಶೋಷಣೆಗೆ ಬಲಿಯಾಗಿ ದುರಂತದ ಮೂಲಕ ಮುಂದಿನ ಪೀಳಿಗೆಗೆ ಒಂದು ಎಚ್ಚರಿಕೆಯ ಧ್ವನಿಯನ್ನು ವ್ಯಕ್ತಪಡಿಸಿದ್ದಾರೆ. ಗಂಡು ತನ್ನ ಸುಖಕ್ಕಾಗಿ ಅವಳ ಜೀವನ ಮೀಸಲಿಡಬೇಕು ತನ್ನ ಲೈಂಗಿಕ ಆಮಿಷಕ್ಕೆ ಬಲಿಯಾಗಲು ಇರುವ ಪ್ರಾಣಿಯೆಂಬ ದರ್ಪ, ಅಹಂಕಾರದ ಅಡಿಯಲ್ಲಿ ಪುಡಿಯಾಗುವ ಹೆಣ್ಣಿನ ಸ್ಥಿತಿ ಬದಲಾಗಬೇಕೆಂಬ ಅಭಿಪ್ರಾಯ ಮಧುರವಾಣಿಯ ಮೂಲಕ ಹೆಣ್ಣಿನ ಒಂದು ವಿಶಿಷ್ಟ ಸ್ಥಾನವನ್ನು ಅವಳ ಮೂಲಕ ಗುರುತಿಸಬಹುದು.

ಹೆಣ್ಣಿನ ಪ್ರಗತಿ, ವಿಮೋಚನೆ ಬಾಹ್ಯ ಜಗತ್ತಿನ ಬದಲಾವಣೆಗಳನ್ನು ಅವಲಂಬಿಸಿರುವಂತೆ ಅವಳ ಮಾನಸಿಕ ಜಗತ್ತಿನ ಪರಿವರ್ತನೆಯನ್ನು ಅವಲಂಬಿಸಿದೆ ಎಂಬುದನ್ನು 'ದೂರದ ಬೆಟ್ಟ'ದ ನಾಯಕಿ 'ಸುನಂದ'ಳ ಮೂಲಕ ಪ್ರತಿಪಾದಿಸಿದ್ದಾರೆ. ಹೊಸ ಮೌಲ್ಯಗಳ ಸ್ವೀಕಾರ ಒಂದು ಸಂಕೀರ್ಣ ಪ್ರಕ್ರಿಯೆ. ಆದರೆ ಈ ಪ್ರಕ್ರಿಯೆಯಿಲ್ಲದೆ ನೀಜವಾದ ಪರಿವರ್ತನೆ ಅಸಾಧ್ಯ. ಇದು ಮನೋವಿಶ್ಲೇಷಣಾ ಸಿದ್ಧಾಂತದ ಹಿನ್ನೆಲೆಯನ್ನು ಸ್ತ್ರೀಯರ ಪ್ರಗತಿಗಾಗಿ ಬಳಸಿಕೊಳ್ಳುವ ರೀತಿ ಕುತೂಹಲವನ್ನುಂಟು ಮಾಡುತ್ತದೆ. ಸಣ್ಣ ವಯಸ್ಸಿನ ವಿಧವೆ ಸುನಂದ ತನಗೆ ನಿಷಿದ್ಧವಾಗಿದ್ದ ಮರುಮದುವೆಯನ್ನು ಸಹಜವಾಗಿ ಒಪ್ಪಿಕೊಳ್ಳುವ ಸ್ಥಿತಿ ಇಲ್ಲದಾಗೆ ಉಂಟಾಗುವ ಆತಂಕ ಘರ್ಷಣೆಯನ್ನು ಸುನಂದ ಎದುರಿಸುತ್ತಾಳೆ. ಅವಳ ಮರುಮದುವೆಗೆ ಕುಟುಂಬದ ಮತ್ತು ಹೊರಗಿನವರ ಪ್ರೋತ್ಸಾಹವಿದ್ದರೂ ಅವಳೊಳಗೆ ಅದಕ್ಕೆ ತಡೆಯೊಡ್ಡುತ್ತದೆ. ಮಹಿಳೆಯ ಮುನ್ನಡೆ, ಅವಳಿಗೆ ದೊರಕಬೇಕಾದ ಸಾಮಾಜಿಕ ನ್ಯಾಯ, ಅದಕ್ಕೆ ಬೇಕಾಗುವ ಹೆಣ್ಣಿನ ಮಾನಸಿಕ ಸಿದ್ಧತೆಯಲ್ಲಿ ಅವಳ ಪ್ರಗತಿ ಅಡಗಿದೆ ಎಬುದನ್ನು ವ್ಯಕ್ತಪಡಿಸಲಾಗಿದೆ. ಇಲ್ಲಿ ಮನಃಶಾಸ್ತ್ರದ ವೈದ್ಯರೂ ಸುನಂದಾಗೆ ಕೊಡುವ ಸಲಹೆ, ಸೂಚನೆಗಳೂ ಸ್ತ್ರೀಪರವಾದ ಹೊಸಮೌಲ್ಯಗಳ ದೃಷ್ಟಿಯ ಹಂಬಲಗಳಾಗಿವೆ. ಇದು ಸಂಕ್ರಮಣ ಕಾಲದ ನಮ್ಮ ಬದುಕಿನ ಒಂದು ಅಗತ್ಯವಾಗಿದೆ.

ಹೆಣ್ಣಿನ ಮಾನಸಿಕ ಅಸ್ತವ್ಯಸ್ತತೆಗೆ ಗಂಡ, ಅತ್ತೆ, ತಾಯಿ, ತಂದೆ, ಸುತ್ತಲಿನ ಸಮಾಜದ ಕಾರಣದಿಂದಾಗಿ ಅವಳ ಬದುಕು ದುರಂತವಾಗುತ್ತದೆ ಎಂಬುದನ್ನು ಶರಪಂಜರದ ಕಾವೇರಿಯ ಮೂಲಕ ಪ್ರತಿಪಾದಿಸಿದ್ದಾರೆ.

ಸಮಾಜದ ದ್ವಿಮುಖ ನ್ಯಾಯಪದ್ಧತಿಯಿಂದಾಗಿ ವಿವಾಹ ಬಾಹಿರ ಗಂಡುಹೆಣ್ಣಿನ ಸಂಬಂಧವಲ್ಲಿ ದುರಂತಕ್ಕೆ ಒಳಗಾಗುವವಳು ಹೆಣ್ಣೆ. ಮದುವೆಗೆ ಮುಂಚೆ ತಾರುಣ್ಯದ ಭರದಲ್ಲಿ ಪರಿಸ್ಥಿತಿಯ ಸುಳಿಗೆ ಸಿಕ್ಕಿ ಲೈಂಗಿಕ ಶೋಷಣೆಗೆ ಓಳಗಾದ ಹೆಣ್ಣು ಶರಪಂಜರದ ಕಾವೇರಿ ಸತೀಶನೊಂದಿಗೆ ವಿವಾಹವಾದ ಮೇಲೆ ಎಲ್ಲವನ್ನು ಮರೆತು ಸುಖ ಜೀವನ ನಡೆಸಲು ಪ್ರಯತ್ನಿಸುವ 'ಕಾವೇರಿ' ದುರ್ಬಲ ಸಂದರ್ಭದಲ್ಲಿ ಅವಳಲ್ಲಡಗಿದ ಅಪರಾಧಪ್ರಜ್ಞೆ ಜಾಗೃತವಾಗಿ ಮಾನಸಿಕ ವಿಕಲ್ಪಕ್ಕೆ ಒಳಗಾಗಿ ಚಿಕಿತ್ಸೆ ಪಡೆದು ಗುಣಮುಖಳಾಗಿ ಮನೆಗೆ ಬಂದ ಕಾವೇರಿ ಈ ಸಮಾಜದ ಕ್ರೂರನಿಂದನೆ, ಅವಮಾನನಗಳನ್ನು ಸಹಿಸದ ಅವಳ ಮನಸ್ಸು ಮತ್ತೆ ಅಸ್ತವ್ಯಸ್ತವಾಗುತ್ತದೆ. ಹುಚ್ಚು ಬಿಟ್ಟರೂ ಮತ್ತೆ ಹುಚ್ಚು ಹಿಡಿಸುವ ಈ ಸಮಾಜವನ್ನು ಅವಳ ದುರಂತಕ್ಕೆ ಸಂಪೂರ್ಣ ಹೊಣೆಯಾಗಿಸಿದ್ದಾರೆ.

ಎರಡು ವರ್ಷ ಆಸ್ಪತ್ರೆಯ ವನವಾಸದಿಂದ ಮನೆಗೆ ಬಂದ 'ಕಾವೇರಿ'ಯ ಮನಸ್ಸು ಪ್ರೀತಿಗಾಗಿ, ಭದ್ರತೆಗಾಗಿ, ಇತರರ ವಿಶ್ವಾಸಕ್ಕಾಗಿ ಹಂಬಲಿಸುತ್ತದೆ. ಆದರೆ ಅವಳು ತನ್ನ ಸುತ್ತಲೂ ಕಾಣುವುದು ಸಂಶಯ, ಕನಿಕರ ಹಾಗೂ ಮರುಕ. ಅವಳ ಪ್ರತಿಯೊಂದು ಕಾರ್ಯವನ್ನೂ ಇತರರು ಸಂದೇಹಿಸುತ್ತಾರೆ. ಮೊದಲಿಗೆ, ಅವಳು ಮನೆಗೆ ಮರಳಿ ಬಂದಾಗ ಸತೀಶನ ಅಕ್ಕ ಮನೆಯ ಜವಾಬ್ದಾರಿಯನ್ನು ಹೊತ್ತಿರುವುದರಿಂದ ಯಾರೂ ಅವಳಿಗೆ ಗಮನ ಕೊಡುವುದಿಲ್ಲ. ಅವಳ ಮಕ್ಕಳೂ ಕೂಡಾ ಅವಳಿಗೆ ಹೆದರುತ್ತಾರೆ ಹಾಗೆ ಅತ್ತೆಗೆ ಹೆಚ್ಚು ಹೊಂದಿಕೊಂಡಿರುತ್ತಾರೆ. ಅವಳ ಗೆಳತಿಯರು ಅವಳಿಂದ ದೂರವಾದರೆ, ಅಪರಿಚಿತರು ಅವಳನ್ನು ಮರುಕದಿಂದ ನೋಡುತ್ತಾರೆ. ಎಲ್ಲದಕ್ಕಿಂತ ಹೆಚ್ಚಾಗಿ,ಅ ವಳ ಗಂಡ ಅವಳನ್ನು ಹೆಂಡತಿಯಂತೆ ನಡೆಸಿಕೊಳ್ಳಲು ಸಿದ್ಧನಿಲ್ಲ. ಒಂದು ಇಕ್ಕಟ್ಟಿನ ಸ್ಥಳಕ್ಕೆ ಬೇಟೆನಾಯಿಗಳಿಂದ ಅಟ್ಟಲ್ಪಟ್ಟ ನರಿಯಂತೆ, ಕಾವೇರಿ, ಸಂಪೂರ್ಣ ಹತಶಳಾಗಿ ತನ್ನ ಗಂಡನನ್ನು ಕೇಳುತ್ತಾಳೆ.

"ಒಂದು ಸಲಕ್ಕೆ ನಾನು ಹುಚ್ಚಿಯಾಗಿದ್ದ ಮಾತ್ರಕ್ಕೆ ಸಾಯುವವರೆಗೂ ನಾನು ಹುಚ್ಚಿಯೇ? ನೀವೆಲ್ಲಾ ಯಾಕೆ ನನ್ನ ಹಾಗೆ ಭಾವಿಸುತ್ತೀರಿ? ನಾನು ಒಂದು ಸಲಕ್ಕೆ ಹುಚ್ಚಿಯಾಗಿದ್ದೆ ಎನ್ನುವುದನ್ನು ನೀವು ಮರೆಯುವುದಿಲ್ಲ. ನನಗೂ ಮರೆಯಗೊಡುವುದಿಲ್ಲ. ಗಳಿಗೆ ಗಳಿಗೆಗೂ ಹೆಜ್ಜೆ ಹೆಜ್ಜೆಗೂ 'ನೀನು ಹುಚ್ಚು' ಎಂದು

ನಿಮ್ಮ ಪ್ರತಿಯೊಂದು ಮಾತಿನಲ್ಲಿ, ನೋಟದಲ್ಲಿ, ಕೆಲಸದಲ್ಲಿ ನನ್ನನ್ನು ತಿವಿಯುತ್ತೀರಿ. ಅಂಗಡಿಯಾತ ನನಗೆ ಸಾಮಾನು ಕೊಡಬಹುದೇ, ಬಾರದೇ ಎಂದು ಅನುಮಾನಿಸಿದ. ನನಗೆ ಕೋಪಬಂದು ನನ್ನ ಕೈಲಿದ್ದ ಚೀಟಿಯನ್ನು ಅವನ ಮುಖದ ಮೇಲೆ ಎಸೆದೆ. ಅಲ್ಲಿಂದ ಮಾರ್ಕೆಟ್‌ಗೆ ಹೋದರೆ ನಾನೆಲ್ಲಿಯೋ ಓಡಿಹೋದೆ, ದಾರಿ ತಪ್ಪಿಸಿಕೊಳ್ಳುತ್ತೇನೆ, ಮಾನ ಮಾರಿಕೊಳ್ಳುತ್ತೇನೆ ಎಂದು ನೀವು ತಿಳಿದಿರಿ. ನಾನು ಹುಚ್ಚಿಯಾಗಿದ್ದೆ ಎನ್ನುವುದನ್ನೂ ನೀವು ಮರೆತು, ನನಗೂ ಮರೆಯಲು ಅವಕಾಶ ಕೊಡಿ. ನನಗೂ ನಾಲ್ಕು ಜನರಂತೆ ಬಾಳಬೇಕೆಂಬ ಆಸೆ ಇದೆ..."

ಮಾತನಾಡುತ್ತಾ ಕಾವೇರಿಯ ಆವೇಶ ಕರಗಿ ಬದಲು ದುಃಖ ಅವಳನ್ನು ಆವರಿಸಿತು. ಕಾವೇರಿ ನೆಲದ ಮೇಲೆ ಕುಸಿದು ಕುಳಿತು ಬಿಕ್ಕಿ ಬಿಕ್ಕಿ ಅಳತೊಡಗಿದಳು.

"ನಾನು ಅಲ್ಲೇ ಸುಖವಾಗಿದ್ದೆ. ನನ್ನ ಅಲ್ಲಿಗೇ ಕಳಿಸಿಬಿಡಿ. ನಿಮಗೆ ನಾನು ಹೊರೆಯಾಗಿದ್ದರೆ, ನಿಮ್ಮೊಡನೆ ನಾನು ಬರುವುದು ಅವಮಾನವಾಗುವಂತಿದ್ದರೆ ನನ್ನ ಅಲ್ಲಿಗೇ ಕಳಿಸಿಬಿಡಿ. ಅಲ್ಲಿ ಯಾರೂ ನಿಮ್ಮಂತೆ ನಿರ್ದಯಿಗಳಲ್ಲ. ಎಲ್ಲರೂ ನನ್ನನ್ನು ಪ್ರೀತಿಯಿಂದ ಕಾಣುತ್ತಿದ್ದರು. ಜೀವಕ್ಕೆ ಜೀವ ಕೊಡುವ ಗೆಳತಿಯರೂ ಅನೇಕರು ನನಗೆ ಅಲ್ಲಿ ಸಿಕ್ಕಿದ್ದರು. ಆಸ್ಪತ್ರೆಯ ಒಳಗಿರುವವರೇ ಸರಿಯಾದವರು. ಆಸ್ಪತ್ರೆಯ ಹೊರಗಿರುವವರೇ ಹುಚ್ಚರು. . ." (ಪು.೧೫೦).

ಕಾವೇರಿ ಮತ್ತೆ ಬುದ್ಧಿವಿಕಲ್ಪಕ್ಕೆ ತುತ್ತಾಗಲು ಸಂದರ್ಭದ ಒತ್ತಡಗಳು ಮೇಲಿಂದ ಮೇಲೆ ಸಮಾಜದಿಂದ, ಸಂಬಂಧಿಕರಿಂದ ಒದಗಿ ಬಂದುದರ ಫಲವಾಗಿ ಕಾವೇರಿ ಬದುಕುವ ಅವಕಾಶ ಕೊಡದ ಅನುಕಂಪ ಹಾಗೂ ಸಹಾನುಭೂತಿಯನ್ನು ತೋರಿಸದ ಇಡೀ ಸಮಾಜ ದೋಷಿಯಾಗಿ ನಿಲ್ಲುತ್ತದೆ. ಕಾವೇರಿ ಹುಚ್ಚಿಯಾಗಿದ್ದಳು ಎಂಬ ಕಾರಣಕ್ಕೆ ಅವಳ ತಂಗಿಯ ಮದುವೆ ಮುರಿದು ಬೀಳುತ್ತದೆ. ಇದರಿಂದ ಆವಳ ಮನಸ್ಸಿನಲ್ಲಿ ಅಪರಾಧಿ ಪ್ರಜ್ಞೆಯ ಒತ್ತಡವೂ ಸೇರುತ್ತದೆ. ಎಲ್ಲಕ್ಕೂ ಮಿಗಿಲಾಗಿ ಅವಳ ಗಂಡನ ಅನೈತಿಕ ಸಂಬಂಧ ಇಟ್ಟುಕೊಂಡಿದ್ದಾನೆ. ಯಾರನ್ನೂ "ಮೇಲೆ ಬಿದ್ದ ಸೂಳೆ ಮೂರು ಕಾಸಿಗೂ ಬೇಡ" ಎಂದು ತನ್ನ ಗಂಡ ತಿರಸ್ಕರಿಸಿದ್ದನೋ ಅವಳೊಡನೆಯೇ ಅವನಿಗೆ ದೈಹಿಕ ಸಂಬಂಧ ತಿಳಿದ ಕ್ಷಣದಲ್ಲಿ ಕಾವೇರಿಯ ಬುದ್ಧಿಸ್ಥಿರತೆ ಚೂರು ಚೂರಾಗುತ್ತದೆ. ಗಂಡನನ್ನು ಪ್ರಶ್ನಿಸಿದಾಗ ನಿಸ್ಸಂಕೋಚದಿಂದ ಅವನು ತನ್ನ ವರ್ತನೆಯನ್ನು ಒಪ್ಪಿಕೊಳ್ಳುತ್ತಾನೆ.

"ಕಾವೇರಿಯ ತಲೆಯಲ್ಲಿ ಅಗ್ನಿಪರ್ವತ ಸಿಡಿದಂತೆ ಆಸ್ಫೋಟವಾಯಿತು. ಜಲಪ್ರಳಯವಾಗುತ್ತಿರುವಂತೆ ಭಾಸವಾಗಿ ಕಾವೇರಿ ಅತ್ತಿಂದತ್ತ ಹೊರಳಾಡಿದಳು. ಕಿವಿಯಲ್ಲಿ, ತಲೆಯಲ್ಲಿ ಅಸಾಧ್ಯ ಸದ್ದಾಗತೊಡಗಿತು. ದಶದಿಕ್ಕುಗಳಿಂದಲೂ ಮೊನಚಾದ ಬಾಣಗಳು ಒಂದಾದ ಮೇಲೊಂದರಂತೆ ಹಾರಿ ಬಂದು ಕಾವೇರಿಯ ಸುತ್ತಲೂ ಪಂಜರವನ್ನು ನಿರ್ಮಿಸಿ ಅವಳನ್ನು ಬಂದಿಯನ್ನಾಗಿ ಮಾಡಿದವು.

ಪಂಜರದ ಆಚೆ ಸಾವಿರಾರು ಜನರು ನಿಂತು ಗಹಗಹಿಸಿ ನಗತೊಡಗಿದರು.

"ಕಾವೇರಿ ಹುಚ್ಚಿ, ಹುಚ್ಚಿ ಕಾವೇರಿ. . . ಅದೋ ಅವಳು ಹುಚ್ಚಿ ಪಾಪ; ಅವಳ ಗಂಡ ಸೂಳೇನ ಇಟ್ಟುಕೊಂಡಿದ್ದಾನೆ, ಪಾಪ!"

ಕಾವೇರಿ ಎರಡು ಕೈಗಳಿಂದಲೂ ಕಿವಿಯನ್ನು ಗಟ್ಟಿಯಾಗಿ ಮುಚ್ಚಿಕೊಂಡಳು. ಆದರೂ ಜನ ನಗುವಿನ ಸದ್ದು ಕಾವೇರಿಯ ತಲೆಯ ನರಗಳನ್ನು ಒಡೆದು ಬಿಡುವಷ್ಟು ರಭಸದಿಂದ ಅವಳೆಡೆಗೆ ಹರಿದು ಬಂತು.

ಒಲೆಯಲ್ಲಿ ಬಿದ್ದ ಹರಿಣಿಯಂತೆ ಕಾವೇರಿ ಚಡಪಡಿಸಿದಳು. ಪಂಜರದ ಆಚೆ ಜನರು ನಿಂತು ಬಂಧನದಲ್ಲಿ ಸಿಕ್ಕಿ ಬಿದ್ದಿದ್ದ ಕಾವೇರಿಯ ಮೇಲೆ ಕಲ್ಲುಗಳನ್ನು ಎಸೆಯತೊಡಗಿದರು.

ಜನಸಮೂಹದಲ್ಲಿ ಎಲ್ಲರಿಗಿಂತಲೂ ಮುಂದೆ ಸತೀಶ ನಿಂತು ಕಾವೇರಿಯ ಮೇಲೆ ದೊಡ್ಡ ದೊಡ್ಡ ಬಂಡೆಗಳನ್ನು ಎಸೆಯುತ್ತಿದ್ದ.

ಜ್ವಾಲಾಮುಖಿಯೊಂದು ಲಾವಾರಸದ ಪ್ರವಾಹವನ್ನು ಕಾರುತ್ತಾ ಬೆಂಕಿಯ ಉಂಡೆಗಳನ್ನು ಉಗಿಯುತ್ತಾ ಕಾವೇರಿಯ ಮೇಲೆ ನುಗ್ಗಿ ಬಂತು.

"ಕಾವೇರಿ. . . ಕಾವೇರಿ. . ." ಎಂದು ಸತೀಶ ಕಾವೇರಿಯ ಭುಜವನ್ನು ಹಿಡಿದು ಕುಲುಕಿದ.

"ನನಗೆ ಬಾಳೋಕೆ ನೀವು ಒಂದು ಅವಕಾಶನೂ ಕೊಡಲಿಲ್ಲ. ಒಂದೇ ಒಂದು ಅವಕಾಶ ಕೊಡಬೇಕಾಗಿತ್ತು ಒಂದೇ ಒಂದು. . ."

ಕಾವೇರಿ ಕಾವೇರಿ

"ಒಂದೆ ಒಂದು – ಒಂದೆ ಒಂದು"

"ಕಾವೇರಿ. . . ಕಾವೇರಿ"

ಕಾವೇರಿಯ ಕಣ್ಣುಗಳು ಶೂನ್ಯದತ್ತ ತಿರುಗಿದವು. ಅಗಲವಾದ ಕಣ್ಣುಗಳ ತುಂಬಾ ಉನ್ಮಾದ ತುಂಬಿಕೊಂಡಿತ್ತು.

ನಗೆಯಲ್ಲಿ ಉನ್ಮಾದ. . . ದನಿಯಲ್ಲಿ ಉನ್ಮಾದ.. . . ಮಾತಿನಲ್ಲಿ ಉನ್ಮಾದ. . . ಅಳುವಿನಲ್ಲಿ ಉನ್ಮಾದ.

"ಕಾವೇರಿ. . . ಕಾವೇರಿ. . ."

"ಕಳೆದು ಹೋಗಿದೆ ಬನ್ನಿ ಹುಡುಕಿಕೊಂಡು ಬರೋಣ ಬನ್ನಿ ನದೀ ತೀರ – ಬೆಳದಿಂಗಳು"

"ಕಾವೇರಿ. . . ಕಾವೇರಿ"

ಹೋಗೋಣ ಅಲ್ಲಿಗೆ ಬನ್ನಿ ಬನ್ನಿ"

"ಕಾವೇರಿ"

ಕಾವೇರಿ ಎದ್ದು ಕುಳಿತು ಕೆಂಗಣ್ಣಿನಿಂದ ಗಂಡನನ್ನು ನೋಡಿ, "ನೀವು ಬಾರದಿದ್ದರೆ ನಾನೊಬ್ಬಳೇ ಹೋಗ್ತೀನಿ" ಎನ್ನುತ್ತಾ ಹೊರಗೋಡಿದಳು (ಪು.೨೩೬–೨೩೭).

ಬುದ್ಧಿಭ್ರಮಣೆಯಿಂದ ಗುಣವಾದ ಮೇಲೂ ವ್ಯಕ್ತಿಯನ್ನು ಹೀನವಾಗಿ ಕಂಡು ಮತ್ತೆ ಅವರು ಮೊದಲಿನಂತೆ ಸಹಜವಾಗಿ ಬದುಕು ನಡೆಸಲು ಸಾಧ್ಯವೇ ಆಗದಂತೆ ಸಮಾಜ ವರ್ತಿಸುತ್ತದೆ. ಕಾವೇರಿ ಮತ್ತೆ ಹುಚ್ಚಿಯಾದ ಸಂದರ್ಭದಲ್ಲಿ ಅವಳ ಅತ್ತೆಯ ಮೂಲಕ ವಿಷಾದ ವ್ಯಕ್ತಪಡಿಸುತ್ತಾರೆ. "ಬಹುಶಃ ಸತೀಶ, ತಾವು, ಮಕ್ಕಳು ನೆರೆಹೊರೆ, ಆಳುಗಳು, ಸಮಾಜ ಎಲ್ಲ ಕೊಂಚ ಮನಸ್ಸು ಮಾಡಿದ್ದರೆ, ಸಹೃದಯಿಗಳಾಗಿದ್ದರೆ ಕಾವೇರಿ ಮೊದಲಿನಂತೆ ಬಾಳಲು ಸಾಧ್ಯವಾಗುತ್ತಿತ್ತೇನೋ; ಆಸ್ಪತ್ರೆಯಿಂದ ಮನೆಗೆ ಬಂದ ಆರು ತಿಂಗಳಲ್ಲೇ ತಾವೆಲ್ಲರೂ ಸೇರಿ ಕಾವೇರಿಯನ್ನು ಮತ್ತೆ ಅಲ್ಲಿಗೆ ತಳ್ಳುತ್ತಿಲ್ಲವಷ್ಟೇ?" (ಪು.೨೩೯).

'ಕಾವೇರಿ' ಒಂದು ದುರಂತಕ್ಕೆ ಒಳಗಾದ ಹೆಣ್ಣು ಅವಳ ಮೂಲಕ ಸಮಾಜದ ದೃಷ್ಟಿಕೋನದಲ್ಲಿ ಮಾನಸಿಕ ಅಸ್ವಸ್ಥರನ್ನು ನೋಡುವ ದೃಷ್ಟಿಕೋನದಲ್ಲಿ ಬದಲಾಗಬೇಕು ಎಂಬ ಸಂದೇಶವಿದೆ. ಯಾವುದೇ ದುರಂತ ಹೆಣ್ಣನ್ನು ಅವಳ ಸಮಸ್ಯೆಗೆ, ಹಿನ್ನೆಲೆಯನ್ನು ಸಮರ್ಥನೀಯವಾಗಿ ಪ್ರತಿಪಾದಿಸಿ ಅಲ್ಲಿನ ಪರಿಸ್ಥಿತಿಗೆ ಸೂಕ್ತ ಪರಿಹಾರವನ್ನು ಪ್ರಗತಿಪರ ನೆಲೆಯಲ್ಲಿ ಕಂಡುಕೊಳ್ಳುವಂತೆ ಮಾಡುವುದು ತ್ರಿವೇಣಿಯವರ ವೈಶಿಷ್ಟ್ಯ.

ಮಗು ಮತ್ತು ತಾಯಿಯ ಸಂಬಂಧ ಕಡಿದುಹೋದಾಗ ಮಗುವಿನ ಮನಸ್ಸು ವಿಕೃತಿಯನ್ನು ಹೊಂದಿ ಅವರ ಬದುಕು ಅಸಹನೀಯ ಹಾಗೂ ಅಸಹಜವಾಗುತ್ತದೆ. ಇದಕ್ಕೆ ನಿದರ್ಶನ 'ಬೆಕ್ಕಿನ ಕಣ್ಣು' ನಾಯಕಿ 'ಕುಸುಮ'.

'ಕುಸುಮ' ತಿರಸ್ಕಾರ, ಅನಾದರ, ಹಿಂಸೆಗೆ ಗುರಿಯಾಗಿ ಮಾನಸಿಕ ರೋಗಿಯಾಗಲು ಸೂಕ್ತವಾದ ಒಂದು ಕೌಟುಂಬಿಕ ಹಿನ್ನೆಲೆ ಸೂಕ್ಷ್ಮವಾಗಿ ಹೆಣೆದಿದ್ದಾರೆ.

ಇದರಲ್ಲಿ ಕುಸುಮಾ ಮತ್ತು ಅವಳ ಚಿಕ್ಕಮ್ಮ ಇವರ ನಡುವಿನ ದ್ವೇಷ ಮುಖ್ಯವಾಗಿದ್ದರೆ, ಕುಸುಮ ತನ್ನ ತಂದೆಯಿಂದ ದೂರವಾಗಿ ಮೊದಲ ಬಾರಿಗೆ ಒಬ್ಬಳೇ ರಾತ್ರಿ ಕುಸುಮ ಮಲಗಬೇಕಾಗಿ ಬಂದಾಗ, ತನ್ನ ರಕ್ಷಣೆ ಇಲ್ಲದ ಸ್ಥಿತಿ ಸೂಚಿಸುವ ಕೆಟ್ಟ ಕನಸೊಂದರಿಂದ ಮಧ್ಯರಾತ್ರಿಯಲ್ಲಿ ಕುಸುಮಾಳಿಗೆ ಎಚ್ಚರವಾಗುತ್ತದೆ. ಆ ಸನ್ನಿವೇಶವನ್ನು ಈ ಕೆಳಗಿನಂತೆ ನೋಡಬಹುದು:

"ಕುಸುಮ ಛಟಾರನೆ ಸಿಡಿದ ಸಿಡಿಲಿನ ದನಿ ಕೇಳಿ ಎಚ್ಚೆತ್ತಳು. ಕಣ್ಣು ಕುರುಡಾಗುವಂತೆ ಆಕಾಶದಲ್ಲಿ ನೂರಾರು ಮಿಂಚು ಕೋಲುಗಳು ಹೊಳೆಹೊಳೆದು ಮಾಯವಾಗುತ್ತಿದ್ದವು. ಆ ಮಿಂಚುಗಳ ಬೆನ್ನಟ್ಟಿ ಬಂದಂತೆ ಗುಡುಗು, ಸಿಡಿಲು ಭೂಮಿಯನ್ನೇ ಅದುರಿಸುವಂತೆ ಸದ್ದು ಮಾಡುತ್ತಿದ್ದವು. ಕುಸುಮ ಗಟ್ಟಿಯಾಗಿ ಚೀರಿದಳು.

"ಅಣ್ಣಾ. . . ಅಣ್ಣಾ. . . ಅಣ್ಣಾ. . ."

ಅವಳ ಕರೆಗೆ ಯಾರೂ ಓಗೊಡಲಿಲ್ಲ. ತಂದೆ ತನ್ನನ್ನು ಈ ರೀತಿ ಮೋಸಗೊಳಿಸಬಹುದೆಂದು ಕುಸುಮ ಕನಸಿನಲ್ಲಿಯೂ ಎಣಿಸಿರಲಿಲ್ಲ. ಹೃದಯವನ್ನು ನಡುಗಿಸುತ್ತಿದ್ದ ಹೆಸರಿಕೆಯೊಡನೆ, ತಂದೆಯ ಮೋಸವೂ ಸೇರಿದುದರಿಂದ ಕುಸುಮ ಮತ್ತೊಮ್ಮೆ ಹುಚ್ಚಿಯಂತೆ ಚೀರಿದಳು ಅಬ್ಬರಿಸುತ್ತಿದ್ದ ಗುಡುಗಿನ ಸದ್ದನ್ನೂ ಮೆಟ್ಟಿ ತುಳಿಯುವಂತೆ.

ಈ ಬಾರಿಯೂ ಕುಸುಮಳಿಗೆ ತಂದೆಯಿಂದ ಉತ್ತರ ಬರಲಿಲ್ಲ. ಬದಲು ರೂಮಿನ ಬಾಗಿಲು ಸಿಘಾಣವ್ಹಾ್ಇ ಅರ್ಧ ತೆರೆಯಿತು. ಹೊಸಲಿನ ಆಚೆ ಪದ್ಮ ಕೈಲಿ ಲಾಂದ್ರವನ್ನು ಹಿಡಿದು ನಿಂತಿದ್ದಳು.

"ಸುಮ್ಮನೆ ಮಲಗಿಕೊಳ್ಳದಿದ್ದರೆ ತೆಗೆದು ಬೀದಿಗೆ ತಳ್ಳುತ್ತೇನೆ" ಎಂದಳು ಕೋಪ, ದ್ವೇಷದಿಂದ ಬಿಗಿದು ಬಂದ ಬಿರುಸಾದ ದನಿಯಲ್ಲಿ.

ಕುಸುಮಾಳಿಗೆ ಮಾತನಾಡುವ ಶಕ್ತಿಯಿರಲಿಲ್ಲ. ಸ್ವಪ್ನದಲ್ಲಿರುವವಳಂತೆ, ತನ್ನ ಕಣ್ಣಲ್ಲಿ ಕಣ್ಣಿಟ್ಟು ನೋಡುತ್ತಿದ್ದ ಒಂದು ಜೊತೆ ಹಸಿರು ಕಣ್ಣುಗಳನ್ನೇ ಭೂತ ಹಿಡಿದವಳಂತೆ ನೋಡಿದಳು.

ಪದ್ಮನ ಕಣ್ಣುಗಳು ಚಕ್ರಕಾರವಾಗಿ ನೋಡುವವರನ್ನು ಬೆದರಿಸುವಂತೆ ಗಿರಗಿರನೆ ತಿರುಗುತ್ತಿದ್ದವು.

ತೀಕ್ಷ್ಣ ನೋಟ, ಕೆಂಚು ಕೂದಲು, ಉಬ್ಬುಹಲ್ಲು ಕತ್ತಿಯ ಮೊನೆಯಂತೆ ಹೃದಯವನ್ನು ಸೀಳುತ್ತಿದ್ದ ದನಿ ಕುಸುಮಾಳ ಶರೀರ ಬಿರುಗಾಳಿಗೆ ಸಿಕ್ಕಿದ ತರಗೆಲೆಯಂತೆ ನಡುಗಿತು.

"ಅಣ್ಣಾ. . . ಅ. . . ಣ್ಣ" ಕುಸುಮ ತೊದಲುತ್ತಲೇ ಇದ್ದಳು.

ಪದ್ಮ ತನ್ನ ಬಲಗೈಯಿಂದ ಕುಸುಮಳ ಬಾಯನ್ನು ಒತ್ತಿ ಹಿಡಿದು "ಬಾಯಿ ಮುಚ್ಚಿಕೊಂಡು ಮಲಗು, ಇಲ್ಲದಿದ್ದರೆ. . ." ಎಂದಳು.

ಎದುರಿಗೆ ನಿಂತಿದ್ದ ಭಯಾನಕ ವಿಕೃತ ರೂಪಿಗಿಂತಲೂ ಕಣ್ಣು ಕುರುಡಾಗುವಂತೆ ಮಿಂಚುತ್ತಿದ್ದ ಕೋಲ್ಮಿಂಚು ನಯನ ಮನೋಹರವಾಗಿ ತೋರಿತು ಕುಸುಮಳಿಗೆ. ಪದ್ಮಳ ಕರ್ಕಶ ದನಿಗಿಂತಲೂ ಸಿಡಿಲಿನಾರ್ಭಟ ಕಿವಿಗಿಂಪೆನಿಸಿತು. ಚಿಕ್ಕಮ್ಮನ ಕರಾಳ ರೂಪ ತನ್ನಿಂದ ದೂರ ಹೋದರೆ ಸಾಕೆನಿಸಿತು. ಹೆದರಿದ್ದ ಕುಸುಮಳಿಗೆ.

ಚಿಕ್ಕಮ್ಮ ಆವೇಶಗೊಂಡಿದ್ದ ಮುಖ, ಹಸಿರು ಮಣಿಗಳಂತೆ ಹೊಳೆಯುತ್ತಿದ್ದ ದ್ವೇಷದ ತವರೂರಾದ ಕಂಗಳ ತೀಕ್ಷ್ಣತೆಯನ್ನು ನೆನೆದು ಕುಸುಮಳ ದೇಹದ ರಕ್ತ ಹೆಪ್ಪುಗಟ್ಟಿತು. ಅವಳು ಕೈಕಾಲುಗಳು ಕಡಿದ ಮರದ ತುಂಡಿನಂತೆ ಬಿದ್ದಿದ್ದವು.

'ಬೆಳಗಾದರೆ ಸಾಕು' ಎಂದು ಬೆಳಗಾಗಿ ಅವಳ ಬೆದರಿದ ಹೃದಯ ಹುಡುಕಾಡಿತು. ರಾತ್ರಿ ಅನಂತವಾಗಿ, ಘೋರವಾಗಿ, ರುದ್ರವಾಗಿ ತೋರಿತು. ಈ ರಾತ್ರಿಗೆ ಕೊನೆಯೇ ಇಲ್ಲವೇ? ಬೇಗ ಬೆಳಗಾಗಬಾರದೇ?

ಮಿಂಚು, ಗುಡುಗುಗಳಾರ್ಭಟಿಸುತ್ತಿದ್ದ ಘೋರ ನಿಶೆಯಲ್ಲಿ ತಬ್ಬಲಿಯಂತೆ ಕುಸುಮ ಬಿಕ್ಕಿ ಬಿಕ್ಕಿ ಅತ್ತಳು" (ಪು.೫೫–೫೮).

ಈ ಭಯಂಕರ ಅನುಭವವು ಕುಸುಮಾಳ ಬಾಳಿನಲ್ಲಿ ಎಂದೂ ಮರೆಯಲಾಗದ ಘಾತಕ ಗಾಯವಾಗಿ ಉಳಿಯುತ್ತದೆ. ತನ್ನ ಚಿಕ್ಕಮ್ಮನನ್ನು ಅವಳು ತೀವ್ರವಾಗಿ ದ್ವೇಷಿಸಲು ಮತ್ತು ಅವಳಿಗೆ ಹೆದರಲೂ ಪ್ರಾರಂಭಿಸುತ್ತಾಳೆ. ದಿನದಿಂದ ದಿನಕ್ಕೆ ಇವರಿಬ್ಬರ ಮಧ್ಯೆ ವೈಷಮ್ಯ ಬೆಳೆಯುತ್ತಲೇ ಹೋಗುತ್ತದೆ. ಮೊದಲು ಕುಸುಮಾ ತನ್ನ ತಂದೆಯಿಂದ ದೂರವಾಗಿ ಒಬ್ಬಳೇ ಮಲಗಬೇಕಾಗುತ್ತದೆ. ಅನಂತರ ಅವಳ ಪಾಕೆಟ್‌ಮನಿ ನಿಲ್ಲುತ್ತದೆ. ಕೊನೆಗೆ, ಅವಳ ತಾಯಿಯು ಕೊಟ್ಟ ಅವಳ ಚಿನ್ನದ ಸರ ಚಿಕ್ಕಮ್ಮನಿಂದ ಕದಿಯಲ್ಪಡುತ್ತದೆ. ಅಲ್ಲದೆ ಕ್ಷುಲ್ಲಕ ಕಾರಣಗಳಿಗಾಗಿ ಅವಳು ಹಿಂಸೆಗೆ ಒಳಗಾಗಿ ಹಸಿವಿನಿಂದ ನರಳುವಂತಾಗುತ್ತದೆ.

ನಿಧಾನವಾಗಿ ಕುಸುಮಳ ನಡವಳಿಕೆ ಅಸಂಬಂಧವಾಗುತ್ತದೆ. ತನ್ನ ಬಾಳಿನ ಒಂದೇ ಒಂದು ಭಾಗ್ಯವಾದ ರಾಜಶೇಖರನನ್ನು ಪದ್ಮ ಅಪಹರಿಸಲಿರುವಳೆಂದು ತಿಳಿದು ಕುಸುಮ ಉನ್ಮಾದಿನಿಯಂತಾಗಿ ತಾನು ಏಕಿರಬೇಕು? ಎಲ್ಲವನ್ನೂ ಮರೆತು ಹೋಗಬಾರದೇ? ನೆನಪಿನ ಬಲೆಗೆ ಬಿದ್ದು ಒದ್ದಾಡುವುದಕ್ಕಿಂತ ಎಲ್ಲವನ್ನು ಮರೆತಿಬಿಡುವುದು ಲೇಸಲ್ಲವೇ? ಮರೆವಿನಲ್ಲಿ ದುಃಖವಿಲ್ಲ, ಸುಖವಿಲ್ಲ. ಅಣ್ಣ, ಚಿಕ್ಕಮ್ಮ, ವಿದ್ಯಾ, ರಾಜಶೇಖರ ಕೊನೆಗೆ ತನ್ನನ್ನೂ ಮರೆತು, ಎಲ್ಲ ಭಾವನೆಗಳನ್ನೂ ಕಿತ್ತೆಸೆದು ಹಾಳಾಗಿ ಹೋಗುವುದು ಮೇಲಲ್ಲವೇ? ಎಂಬ ಆಲೋಚನೆಯಲ್ಲಿ ಅವಳ ಮನಸ್ಸು ವಿಕೃತವಾಗಿ ಉನ್ಮಾದದಿಂದ ಬುದ್ಧಿಭ್ರಮಣೆಗೆ ಒಳಗಾಗುತ್ತಾಳೆ.

ಕುಸುಮಳ ಸ್ಥಿತಿಗೆ ಅವಳ ಚಿಕ್ಕಮ್ಮ ನಡೆದುಕೊಳ್ಳುವ ರೀತಿಯೇ ಕಾರಣವಾಗುತ್ತದೆ. ತಬ್ಬಲಿಯಾದ ಕುಸುಮಳಿಗೆ ಪ್ರೀತಿಯ ವಾತಾವರಣದ ಅಗತ್ಯವಿತ್ತು. ಆದರೆ ಅವಳ ಚಿಕ್ಕಮ್ಮ ಕ್ರೂರತನದಿಂದ ಅವಳ ಬದುಕನ್ನು ಅಸಹನೆವಾಗಿಸುತ್ತಾಳೆ.

ತ್ರಿವೇಣಿಯವರ ಸಮಾಜದ ಎಲ್ಲಾ ರೀತಿಯ ವರ್ತನೆಯ ಹೆಣ್ಣುಗಳನ್ನು ಅವರ ಮನಸ್ಸಿನ ಆಂತರಿಕ ತೊಳಲಾಟವನ್ನು ಎತ್ತಿ ಹಿಡಿದಿರುವುದು ವಿಶಿಷ್ಟವಾಗಿದೆ. ವಿವಾಹ ಜೀವನದ ತನ್ನದೇ ಆದ ಸುಂದರ ಕನಸ್ಸು ಕಟ್ಟಿದ್ದ ಹೆಣ್ಣೊಬ್ಬಳಿಗೆ ಮಗಳಿದ್ದ ವಿಧುರನೊಡನೆ ಮದುವೆಯಾಗುವ ಸಂದರ್ಭ ಒದಗಿ ಬಂದಾಗ ತನ್ನ ಕೋಪ, ಅಸಾಯಕತೆಯನ್ನು ಹತ್ತಿಕ್ಕಲಾರದ ಸಹಜವಾಗಿಯೇ ಮಲತಾಯಿ ಎಂಬ ಧೋರಣೆಯಿಂದ ತನ್ನ ಮಲಮಗಳ ದ್ವೇಷದ ಹುರಿಯಲ್ಲಿ ಸುಡುವವಳು. 'ಬೆಕ್ಕಿನ ಕಣ್ಣು' ಕಾದಂಬರಿಯ 'ಪದ್ಮ'ಳ ಬಗ್ಗೆ ನಮಗೆ ದ್ವೇಷ ಮೂಡಬಹುದು. ಕಾರಣ ತಬ್ಬಲಿ ಹುಡುಗಿ ಕುಸುಮಾಳ ಮಾನಸಿಕ ಅಸ್ವಸ್ಥತೆಗೆ ಪದ್ಮಳ ಮಲತಾಯಿ ಧೋರಣೆಯೇ ಕಾರಣ. ಆದರೆ ಪದ್ಮ ಆ ರೀತಿ ವರ್ತಿಸಲು ಅವಳ ದೇಹದ ದೌರ್ಬಲ್ಯಗಳು, ಅಸಹಾಯಕತೆಗಳು ಹಿನ್ನೆಲೆಯಾಗುತ್ತವೆ. ತ್ರಿವೇಣಿಯವರು ಯಾವುದೇ ಹೆಣ್ಣಿನ ಪೂರ್ವಸಿದ್ಧಾಂತದ ನೆಲೆಯಲ್ಲಿ

ನೋಡುವುದಿಲ್ಲ. ಇಲ್ಲಿ ಎಂಥ ವರ್ತನೆಯ ಹೆಣ್ಣಾದರೂ ಅವಳದೇ ಆದ ಒಂದು ವಿಶಿಷ್ಟ ನೆಲೆಯಲ್ಲಿ ಅನನ್ಯತೆಯನ್ನು ಸಾಧಿಸುತ್ತಾಳೆ. ಇಲ್ಲಿ ಪದ್ಮ ನಾಯಕಿಯಲ್ಲ ಪ್ರತಿನಾಯಕಿ. ಭಿನ್ನವರ್ತನೆಯ ಹೆಣ್ಣುಗಳಿಗೆ ಸುಪ್ತವಾದ ಸಹಜ ಹಿನ್ನೆಲೆ ಪಡೆಯುವುದರಿಂದ ಇಲ್ಲಿನ ಹೆಣ್ಣುಗಳು ಸಹಜವಾಗಿಯೇ ತಮ್ಮ ವ್ಯಕ್ತಿತ್ವದಲ್ಲಿ ಅನನ್ಯತೆಯನ್ನು ಸಾಧಿಸಿಕೊಳ್ಳುತ್ತಾರೆ.

ಪದ್ಮಳ ಮದುವೆ ಅವಳ ತಂದೆಗೆ ವರದಕ್ಷಿಣೆ ಕೊಡಲು ಅಸಮರ್ಥರಾದ ಸಂದರ್ಭದಲ್ಲಿ ಅಷ್ಟೇನೂ ರೂಪವತಿಯಲ್ಲದುದರಿಂದ ಅವಳಿಗೂ ವಯಸ್ಸಾಗುತ್ತಿದೆ. ಅಸಹಾಯಕ ಸ್ಥಿತಿಯಲ್ಲಿ ಚಿಕ್ಕ ಮಗಳುಳ್ಳ ವಿಧುರನೊಡನೆ ಆಗುತ್ತದೆ. ಪದ್ಮಳು ಕುಸುಮಾಳನ್ನು ದ್ವೇಷಿಸಲು ಹಿನ್ನೆಲೆಯಾಗುವ ಪದ್ಮಳ ಭಾವನೆಯನ್ನು ಇಲ್ಲಿ ಗುರುತಿಸಬಹುದು.

"ರಾಯರು ಎರಡನೇ ವರ ಎಂದು ತಿಳಿದಾಗ ಪದ್ಮಳ ಕನಸು ಕತ್ತರಿಸಿತು. ಹೊಸದೊಂದು ಜಗತ್ತಿನಲ್ಲಿ ಹೆಜ್ಜೆಯಿಡಲು ತವಕಿಸುತ್ತಿದ್ದ ಕನಸುಗಾತಿ ತಾನು. ಆದರೆ ತಾನು ಹೆಜ್ಜೆಯಿಡಲಿರುವ ಜಗತ್ತು ತನ್ನ ಪತಿಯಾಗುವವರ ಪಾಲಿಗೆ ಹಳೆಯದು. ಅವರ ಹೃದಯದ ಬಟ್ಟಲಿನಲ್ಲಿರುವ ಪ್ರೇಮಾಮೃತವನ್ನು ಈ ಮೊದಲೇ ಹೆಣ್ಣೊಬ್ಬಳು ಸವಿದಿದ್ದಳಲ್ಲವೇ? ಅವಳು ಬಿಟ್ಟ ಆ ಎಂಜಲು ಪ್ರೇಮ ತನಗೆ ಸಿಕ್ಕಬೇಕೇ? ರಾಯರು ತನ್ನೊಡನೆ ಏಕಾಂತದಲ್ಲಿ ಆಡಬಹುದಾದ ಪ್ರೀತಿಯ ನುಡಿಗಳು ಹಳೆಯ ರಾಗವಲ್ಲವೇ? ಈ ಮೊದಲೇ ಹೆಣ್ಣೊಬ್ಬಳು ಅದೇ ಮಾತುಗಳನ್ನು ಅದೇ ಬಾಯಿಂದ ಕೇಳಿಲ್ಲವೇ? ಬೆಳದಿಂಗಳಿನ ರಾತ್ರಿಯಲ್ಲಿ ನಲ್ಲನ ತೋಳತೆಕ್ಕೆಯಲ್ಲಿ ಮಲಗಿ ಪ್ರಣಯಗೀತೆ ಕೇಳುವ ಕನಸು ಕಾಣುತ್ತಿದ್ದಳು ರಸಿಕ ಹೆಣ್ಣು ಪದ್ಮಾ. ಆದರೆ ರಾಯರ ತೋಳುಗಳು ಈ ಮೊದಲೇ ಬೇರೊಂದು ಹುಡುಗಿಯನ್ನು ಬಂಧಿಸಿರಲಿಲ್ಲವೇ? ದಾಂಪತ್ಯ ಜೀವನದ ಬಗ್ಗೆ ತನ್ನಲ್ಲಿ ಉಕ್ಕುವ ಉತ್ಸಾಹ, ಉಲ್ಲಾಸ, ಉನ್ಮಾದ ರಾಯರಲ್ಲಿ ಎಂದಿಗೂ ಮೂಡಲಾರದೆಂದೇ ಅವಳ ನಂಬಿಕೆಯಾಗಿತ್ತು" (ಪು.೩೪-೩೫).

ಮದುವೆಯಾಗಲು ಇನ್ನು ಯಾರೂ ಸಿಗುವುದಿಲ್ಲವೆಂದು ಖಾತ್ರಿಯಾದುದರಿಂದ ರಾಯರನ್ನು ಮದುವೆಯಾಗಲು ಪದ್ಮ ಒಪ್ಪುತ್ತಾಳೆ. ಅವಳ ಅತೃಪ್ತಿ ಮುದ್ದಿನಿಂದ ಬೆಳೆದ ಕುಸುಮಳ ಹಠಮಾರಿತನದಿಂದ ಹೆಚ್ಚುತ್ತಲೇ ಹೋಗುತ್ತವೆ.

ಆದರೆ, ತನ್ನ ದ್ವೇಷದಿಂದಾಗಿ ಕುಸುಮಾ ಮನೋವೈಕಲ್ಯಕ್ಕೆ ತುತ್ತಾಗಿ ಚಿಕಿತ್ಸಾಲಯವನ್ನು ಸೇರಬೇಕಾಗಿ ಬಂದಾಗ ಅವಳಿಗೆ ನಿಜವಾಗಿಯೂ ದುಃಖವಾಗುತ್ತದೆ. ಕುಸುಮಳ ವೈದ್ಯರೊಂದಿಗೆ ತನ್ನ ತಪ್ಪೆಲ್ಲವನ್ನೂ ಅವಳು ಪ್ರಾಮಾಣಿಕವಾಗಿ ಒಪ್ಪಿಕೊಳ್ಳುತ್ತಾಳೆ. "ಅವಳಿಗೆ ಹುಚ್ಚು ಹಿಡಿಯಲಿ ಎಂದು ನನ್ನ ಅಭಿಲಾಷೆಯಾಗಿರಲಿಲ್ಲ ಡಾಕ್ಟರ್. ನಾನು ಅವಳನ್ನು ಪ್ರೀತಿಸಲಿಲ್ಲ ನಿಜ. ಅವಳ ಹಠಮಾರಿತಕ್ಕಾಗಿ ಹೊಡೆಯಬೇಕಾಯಿತು ಅದೂ ನಿಜ. ಆದರೆ ಅವಳಿಗೆ ಈ ಖಾಯಿಲೆ ಬರಲಿ ಎಂದು ಮಾತ್ರ ನಾನು ಅಪೇಕ್ಷಿಸಲಿಲ್ಲ. ಇಷ್ಟು ಖಂಡಿತವಾಗಿಯೂ ಸತ್ಯ" (ಪು.೨೩೩).

"ಇಂತಹ ಸ್ಥಳಕ್ಕೆ ಕುಸುಮಳನ್ನು ನಾನು ತಳ್ಳಿದೆನೆ? ಎಂದು ಪದ್ಮ ತನ್ನಲ್ಲಿಯೇ ಪಶ್ಚಾತ್ತಾಪ ಪಡುತ್ತಾ ಕುಸುಮ ಗುಣವಾಗಲು ವೈದ್ಯರೂ ಹೇಳಿದಂತೆ ಕೇಳಿ ಸಹಕರಿಸುತ್ತಾಳೆ. ಕುಸುಮಾಳಲ್ಲಿ ಸಹಾನುಭೂತಿಯಿಂದ ನಡೆದುಕೊಳ್ಳುತ್ತಾಳೆ.

ತಪ್ಪನ್ನು ಎಲ್ಲರೂ ಮಾಡುತ್ತಾರೆ. ಆದರೆ ಅದನ್ನು ತಿದ್ದಿಕೊಂಡು ಪಶ್ಚಾತ್ತಾಪ ಪಡುವುದು ಮನುಷ್ಯತ್ವ. ಆ ಮನುಷ್ಯತ್ವದ ಹೆಣ್ಣಾಗಿ ಇಲ್ಲಿ ಪದ್ಮ ಕಂಡು ಬರುತ್ತಾಳೆ. ಶರಂಪಂಜರದಲ್ಲಿ ಸತೀಶನಿಗೆ ಆಗದ ಅರಿವು ಪದ್ಮಳಿಗಾಗಿದೆ. ಹೆಣ್ಣಿನ ನೋವುಗಳಿಗೆ ಹೆಣ್ಣೇ ಸ್ಪಂದಿಸುತ್ತಾಳೆ. ಆದರೆ ಗಂಡನಾದ ಸತೀಶನಿಗೆ ಕಾವೇರಿಯ ನೋವು ವೇದನೆ ಅರ್ಥವಾಗುವುದಿಲ್ಲ. ಸತೀಶ ಒಬ್ಬ ಬದಲಾಗಿ ಕಾವೇರಿಯನ್ನು ಪ್ರೀತಿಯಿಂದ ಕಂಡಿದ್ದರೆ, ಕಾವೇರಿಯ ಬದುಕು ದುರಂತವಾಗುತ್ತಿರಲಿಲ್ಲ. ಸತೀಶನಿಗೆ ಹೋಲಿಸಿದರೆ ಪದ್ಮ ಇಲ್ಲಿ ವಿಶಿಷ್ಟ ವ್ಯಕ್ತಿತ್ವದವಳಾಗಿ ನಿಲ್ಲುತ್ತಾಳೆ.

ತ್ರಿವೇಣಿಯವರ ಮುಖ್ಯ ಕಾಳಜಿ ಹೆಣ್ಣೇ ಎಂಬುದು ಹಲವು ಸ್ತ್ರೀಪಾತ್ರಗಳ ವಿಶ್ಲೇಷಣೆಯಲ್ಲಿ ತಿಳಿದಿದ್ದೇವೆ. ಆದರೆ ಎಲ್ಲೂ ಅವರು ಸ್ತ್ರೀಪರ ಎಂದಾಗಲೀ ಪುರುಷ ವಿರೋಧಿ ಎಂದಾಗಲಿ ಅನ್ನಿಸುವುದಿಲ್ಲ. ಗಂಡು ಹೆಣ್ಣಿನ ಸಮಸ್ಯೆ ಹಾಗೂ ಸಂಬಂಧಗಳ ಬಗ್ಗೆ ಒಂದು ವಸ್ತುನಿಷ್ಠ ದೃಷ್ಟಿಕೋನ ಅವರಲ್ಲಿ ಕಾಣುತ್ತದೆ. ಪುರುಷ-ಸ್ತ್ರೀ ಯಾರನ್ನು ಮಾನವ ವ್ಯಕ್ತಿಗಳಾಗಿ ಗ್ರಹಿಸಿಸುತ್ತಾರೆಯೇ ಹೊರತು ಪಕ್ಷಪಾತ ದೃಷ್ಟಿಯಿಂದಲ್ಲ. ಹೆಂಗಸರ ಹಾಗೆ ಗಂಡಸರಿಗೂ ಸಮಸ್ಯೆಗಳಿವೆ ಎಂಬುದನ್ನು ಅವರ ಮುಚ್ಚಿದ ಬಾಗಿಲು, ತಾವರೆಯ ಕೊಳ ಹೆಣ್ಣೆಲೆ ಚಿಗುರಿದಾಗ ಮೊದಲಾದ ಕಾದಂಬರಿಗಳು ಹಾಗೂ ಹಲವು ಸಣ್ಣ ಕಥೆಗಳಲ್ಲಿ ಕಂಡುಕೊಳ್ಳಬಹುದು.

ತ್ರಿವೇಣಿಯವರ ಬಹುತೇಕ ಕಾದಂಬರಿಗಳು ಸ್ತ್ರೀಪ್ರಧಾನವಾಗಿರುವುವರಲ್ಲಿ ಸೋಜಿಗವೇನಿಲ್ಲ. ನಮ್ಮ ಸಾಮಾಜಿಕ ಸಾಂಸ್ಕೃತಿಕ ಪರಿಸ್ಥಿತಿಯಲ್ಲಿ ಪುರುಷನಿಗಿಂತ ಸ್ತ್ರೀಯರು ಹೆಚ್ಚಿನ ಕೌಟುಂಬಿಕ, ಸಾಮಾಜಿಕ, ಧಾರ್ಮಿಕ ಕಟ್ಟುಪಾಡುಗಳಿಗೆ ಒಳಗಾಗುತ್ತಾರೆ. ತನ್ನ ಅನಿಸಿಕೆಗಳನ್ನು ಮುಕ್ತವಾಗಿ ಹೇಳಿಕೊಳ್ಳುವ ಅವಕಾಶ ಅವಳಿಗಿಲ್ಲ. ತನ್ನ ಮೇಲಿನ ನಿರ್ಬಂಧಗಳಿಂದಾಗಿ ಇಬ್ಬೊಬ್ಬ ಹೆಣ್ಣಿನ ಬದುಕು ಬೇರೆ-ಬೇರೆ ದಾರಿ ಹಿಡಿಯಬಹುದು. ಅವಳ ಬದುಕು ಹೀಗೆ ಆರಂಭವಾಗಿ ಹೀಗೆ ಮುಗಿಯುತ್ತದೆ ಎನ್ನಲು ಸಾಧ್ಯವಿಲ್ಲ. ಆದ್ದರಿಂದ ಒಬ್ಬೊಬ್ಬ ಹೆಣ್ಣು ಒಂಥೊಂದು ಕಥೆಯಾಗುತ್ತಾಳೆ. ಸ್ವತಃ ಸ್ತ್ರೀಯಾದ ಲೇಖಕಿಯ ಅನುಭವ ಪ್ರಂಪಚಕ್ಕೆ ಇವರು ವಸ್ತುವಾಗಿ ಸಿಗುವುದು ಅಷ್ಟೇ ಸಹಜ. ಸೂಕ್ಷ್ಮ ಮನಸ್ಸಿನ ತ್ರಿವೇಣಿಯವರು ಎಲ್ಲ ರೀತಿಯ ಹೆಣ್ಣುಗಳನ್ನೇ ತಮ್ಮ ಕಥೆಗಳಲ್ಲಿ ಮೂಡಿಸಿದ್ದಾರೆ. ಅವರ ನಾಯಕಿ ಪ್ರಧಾನವಾದ ಕಥೆಗಳ ಸ್ತ್ರೀಪಾತ್ರಗಳನ್ನು ಗುರುತಿಸುವಂತೆಯೇ ಇತರ ಪೋಷಕ ಪಾತ್ರಗಳನ್ನು ಗುರುತಿಸದಿದ್ದರೆ ತ್ರಿವೇಣಿಯವರ ಬರವಣಿಗೆ ಹಾಗು ನಿಲುವಿಗೆ ನಾವು ನ್ಯಾಯ ಸಲ್ಲಿಸಿದಂತಾಗುವುದಿಲ್ಲ. ತ್ರಿವೇಣಿಯವರ ಬಹುತೇಕ ಸ್ತ್ರೀಯರು ಸ್ತ್ರೀಯರಲ್ಲಿ ಸಹಜವಾಗಿರುವಂಥ ಉಲ್ಲಾಸ, ಕ್ರಿಯಾಶೀಲತೆ, ಕರ್ತವ್ಯನಿಷ್ಠೆ, ಹಾಸ್ಯಪ್ರಜ್ಞೆ, ಸಜ್ಜನಿಕೆ, ವಾತ್ಸಲ್ಯ, ಅಂತಃಕರಣ, ಮಾನವೀಯತೆ ಮೊದಲಾದ ಸದ್ಗುಣಗಳನ್ನು ಮೈಗೂಡಿಸಿಕೊಂಡ ಆರೋಗವ್ಯಂತ ಮನಸ್ಸಿನವರಾಗಿದ್ದಾರೆ. ಮುಚ್ಚಿದ ಬಾಗಿಲು ಕಾದಂಬರಿಯ ಮನೋವೈದ್ಯನ ಹೆಂಡತಿ ಹೇಮಾ, ತಾವರೆಕೊಳದ ಶಾಂತ, ರತ್ನ, ಶರಂಪಂಜರದ ಕಾವೇರಿ ಹೀಗೆ ಇವರೆಲ್ಲ ಬೇರೆ ಬೇರೆ ಹೆಸರಿನವರು. ಆದರೆ ಇವರೆಲ್ಲರಲ್ಲಿಯೂ ಅದೇ 'ಹೆಣ್ಣು' ಇದ್ದಾಳೆ. ಕೆಲವೊಮ್ಮೆ ಪತಿಯನ್ನು ಕುರಿತ ಇವರ ಸೇವಾನಿಷ್ಠೆಯಿಂದಾಗಿ ಇವರ ವ್ಯಕ್ತಿತ್ವ ತೀರಾ ಸೀಮಿತ ಎನಿಸುವುದೂ ಉಂಟು. ಆದರೆ ಇಲ್ಲಿನ ಬಹುತೇಕ ಸ್ತ್ರೀಯರು ಈ ಗುಣಗಳಿಗಷ್ಟೇ ಸೀಮಿತವಾಗದೆ ಅದನ್ನು ಮೀರಿ ನಿಲ್ಲುತ್ತಾರೆ. ಅವರ ಆಲೋಚನೆಯಲ್ಲಿರುವ ವೈಚಾರಿಕತೆ ಬದುಕಿನ ಸಮಸ್ಯೆಗಳನ್ನು ತಾಳಿಕೊಳ್ಳುವ ಗಟ್ಟಿತನ, ಸಂಯಮ, ಸಾಮರಸ್ಯ ಹಾಗೂ ಹೊಂದಾಣಿಕೆಯ ಸಾಮರ್ಥ್ಯಗಳು ಪುರುಷ ಪಾತ್ರಗಳನ್ನು ಮೀರಿ ನಿಲ್ಲುತ್ತವೆ. ಇದಕ್ಕೆ ತಾವರೆಕೊಳದ ಶಾಂತ ಮತ್ತು ರತ್ನನ ಪಾತ್ರಗಳು ಅತ್ಯುತ್ತಮ ಉದಾಹರಣೆ. ಹುಟ್ಟು. ಸಾವು, ಬದುಕು, ಆತ್ಮಸಂಯಮ ಮೊದಲಾದ ವಿಷಯಗಳನ್ನು ಕುರಿತ ಇವರ ವೈಚಾರಿಕತೆ ದಾರ್ಶನಿಕಮಟ್ಟದ್ದಾಗಿ ಕಾಣುತ್ತದೆ. ಇವರು ಹೆಚ್ಚು ಓದಿದವರಲ್ಲ, ಪ್ರಪಂಚ ಕಂಡವರಲ್ಲ. ಕೌಟುಂಬಿಕ ಚೌಕಟ್ಟಿನಲ್ಲಿದ್ದುಕೊಂಡೇ ಕೆಲವೊಂದು ವಿಷಯಗಳಲ್ಲಿ ಇವರು ತೋರುವ ವೈಚಾರಿಕತೆ, ಹೃದಯವೈಶಾಲ್ಯಗಳನ್ನು ನೋಡಿದಾಗ ಇದುವರೆಗೂ ನಾವು ಹೆಣ್ಣು ಎಂಬ ಜೀವಿಯನ್ನು

ಅರ್ಥಮಾಡಿಕೊಂಡಿರುವುದು ತೀರ ಕಡಿಮೆ ಅನ್ನಿಸದಿರದು. ತ್ರಿವೇಣಿಯವರು ತಮ್ಮ ಬದುಕಿನಲ್ಲಿ ಕಂಡವರನ್ನೇ ಚಿತ್ರಿಸುತ್ತಾರೆ. ಹೀಗೆ ಚಿತ್ರಿಸುವಾಗ ಅವರು ಎಲ್ಲಿಯೂ ಸ್ತ್ರೀಪರ ಅಥವಾ ಪುರುಷ ವಿರೋಧಿ ಎಂಬ ಭಾವ ಮೂಡುವುದಿಲ್ಲ. ಆಧುನಿಕ ಸ್ತ್ರೀವಾದವೂ ಸಹ ಸ್ತ್ರೀಯರ ಸಮಸ್ಯೆಗಳ ಬಗ್ಗೆ ಹೇಳುವುದು ಮಾತ್ರವಲ್ಲ. ಸ್ತ್ರೀಯರಲ್ಲಿ ಒಳಿತೆಂಬುದು ಏನಿದೆಯೋ ಅದನ್ನು ಎತ್ತಿಹಿಡಿಯಬೇಕು ಮತ್ತು ಅದಕ್ಕೆ ಬೆಲೆ ಸಲ್ಲಬೇಕು ಎಂದು ಹೇಳುತ್ತಾರೆ. ಇಂಥ ಯಾವ ವಾದಗಳ ಗಾಳಿ ಇಲ್ಲದ ದಿನಗಳಲ್ಲಿ ಬರೆದ ತ್ರಿವೇಣಿಯವರು ಸಹಜವಾಗಿಯೆ ಇದನ್ನು ಸಾಧಿಸಿದರು ;ಎಂಬುದೇ ಅವರ ವಿಶಿಷ್ಟತೆ. ಇಲ್ಲಿ ಹೆಣ್ಣು ಅಬಲೆಯಾಗಿ ವ್ಯಕ್ತಿವಿಲ್ಲದವಳಾಗಿ ಕಾಣಿಸಿಕೊಳ್ಳುವುದೇ ಇಲ್ಲ. ಇದಕ್ಕೆ ಬದಲು ಭಾವನೆಗಳನ್ನೇ ಹತೋಟಿಯಲ್ಲಿಟ್ಟುಕೊಳ್ಳಲಾರದ ಕರ್ತವ್ಯ ಪ್ರಜ್ಞೆಯಿಂದ ವಿಮುಖರಾದ ಹಾಗೂ ಸಂಯಮವಿಲ್ಲದ ಗಂಡಸರಿಗೆ ಬುದ್ಧಿ, ವಿವೇಕ, ವಿವೇಚನೆಯ ಮಾರ್ಗವನ್ನು ತೋರಿಸಿ ಅವರನ್ನು ಜೀವನಮುಖಿಯಾಗಿಸುತ್ತಾರೆ. ಆದರೆ ಸಾಮಾಜಿಕ, ಕೌಟುಂಬಿಕ ಕಾರಣಗಳಿಂದ ಇಂಥ ಹೆಣ್ಣುಗಳೇ ಬಲಿಪಶುಗಳಾಗಿ ಸಂಕಷ್ಟಗಳಲ್ಲಿ ತೊಳಲಾಡುವುದು ವಿಪರ್ಯಾಸ. 'ಸ್ತ್ರೀವಾದಿ' ಬರಹಗಳಲ್ಲಿ ಸಾಮಾನ್ಯವಾಗಿ ಹೆಣ್ಣಿನ ಏಕಮುಖ ಚಿತ್ರಣವಿರುತ್ತದೆ. ಇದಕ್ಕೆ ಪ್ರತಿಯಾಗಿ ತ್ರಿವೇಣಿಯವರು ಹೆಣ್ಣಿನ ವ್ಯಕ್ತಿತ್ವದ ಎಲ್ಲ ಆಯಾಮಗಳನ್ನೂ ಪ್ರಜ್ಞಾಪೂರ್ವಕವಾಗೇ ಗುರುತಿಸಿ ಅಭಿವ್ಯಕ್ತಿಸಿರುವುದು ಅವರ ಹೆಚ್ಚುಗಾರಿಕೆ.

ಸಾಮಾನ್ಯವಾಗಿ ಹೆಣ್ಣಿನ ಅದರಲ್ಲಿಯೂ ಕಥೆಕಾದಂಬರಿಗಳ ನಾಯಕಿಯರ ಮುಖ್ಯ ಸಮಸ್ಯೆ ಗಂಡುಹೆಣ್ಣಿನ ಸಂಬಂಧ ಹಾಗೂ ಪ್ರೀತಿಪ್ರೇಮಗಳನ್ನೇ ಕುರಿತದ್ದೇ ಆಗಿರುತ್ತದೆ. ವಿವಾಹಪೂರ್ವದಲ್ಲಿ ಅಥವಾ ವಿವಾಹಾನಂತರದಲ್ಲಿ ಪರಪುರುಷನೊಡನೆ ಸ್ತ್ರೀಯ ಸಂಬಂಧವನ್ನು ಇಂದಿಗೂ ನಮ್ಮ ಸಮಾಜ ಒಪ್ಪುವುದಿಲ್ಲ. ಆದರೆ ಪುರುಷನ ವಿಷಯದಲ್ಲಿ ಇದು ಸಹಜವಾದ ಕ್ರಿಯೆ ಎಂಬ ಮನ್ನಣೆ ಇದೆ. ಇದು ನಮ್ಮ ಸಮಾಜದ ದ್ವಿಮುಖ ನೀತಿಗೆ ಸ್ಪಷ್ಟ ಉದಾಹರಣೆ. ಮೆಚ್ಚಿದವರಲ್ಲಿ ಪ್ರೀತಿ ಹುಟ್ಟುವುದು ಗಂಡಿಗೆಷ್ಟು ಸಹಜವೋ ಹೆಣ್ಣಿಗೂ ಅಷ್ಟೇ ಸಹಜ ಎಂಬ ಅರಿವಾಗಲೂ ಹೃದಯ ವೈಶಾಲ್ಯವಾಗಲೀ ಕಂಡುಬಂದ ಪರಿಸ್ಥಿತಿಯಲ್ಲಿ ತ್ರಿವೇಣಿಯವರು ಇಂತಹ ವಸ್ತುವನ್ನೆ ತಮ್ಮ ಅನೇಕ ಕಾದಂಬರಿಗಳ ಮುಖ್ಯ ವಸ್ತುವಾಗಿಸಿದ್ದಾರೆ ಮತ್ತು ತಮ್ಮ ಸ್ತ್ರೀಪಾತ್ರಗಳಲ್ಲಿ ಅಂತಹ ಗುಣವನ್ನೇ ಚಿತ್ರಿಸಿ ಸರಿಯಾದ ಸಮರ್ಥನೆ ಒದಗಿಸಿದ್ದಾರೆ. ಇದಕ್ಕೆ ಅತ್ಯುತ್ತಮ ಉದಾಹರಣೆ ತಾವರೆಕೊಳದ ರತ್ನ ಪಾತ್ರ. "ಒಮ್ಮೊಮ್ಮೆ ಜೀವನ ತುಂಬಾ ನೀರಸವಾಗಿ ತೋರುತ್ತದೆ. ಆಗ ಕನ್ನಡಿ ಎದುರು ನಿಂತು ನಿಮ್ಮ ಮುಖವನ್ನು ನೋಡುತ್ತೇನೆ. ನೋಡಿ ಜೀವನದಲ್ಲಿ ಉತ್ಸಾಹ ಪಡೆಯಲು ಯತ್ನಿಸುತ್ತೇವೆ"

ಎಂದು ಹೇಳುವ ರತ್ನಳ ಮಾತನ್ನು ಗಮನಿಸಬೇಕು. ಅನ್ಯವ್ಯಕ್ತಿಯನ್ನು ಪ್ರೀತಿಸಿದ್ದ ಎಂಬ ಪಾಪಪ್ರಜ್ಞೆ ಇಲ್ಲಿಲ್ಲ ಅಥವಾ ಅಶ್ಲೀಲತೆಯ ಸೋಂಕು ಇಲ್ಲ. ಇದೊಂದು ಸಹಜವಾದ ಕ್ರಿಯೆ ಎಂಬ ಆರೋಗ್ಯಪೂರ್ಣ ನಿಲುವಿದೆ.

ಹೆಣ್ಣಿನ ಅಂತರಂಗದ ಅತ್ಯಂತ ಸೂಕ್ಷ್ಮ ಭಾವನೆಗಳಿಗೆ ಅಭಿವ್ಯಕ್ತಿ ನೀಡಿದ ತ್ರಿವೇಣಿಯವರು ಗತಿಸಿ ನಲ್ವತ್ತು ವರ್ಷಗಳಿಗೂ ಹೆಚ್ಚಾಗಿದ್ದರೂ ಇಂದಿಗೂ ಅವರ ಸ್ತ್ರೀಪಾತ್ರಗಳು ಸಮಕಾಲೀನವೆನ್ನಿಸುವಂತಿರುವುದು ತ್ರಿವೇಣಿಯವರ ಪ್ರತಿಭೆಗೆ ಸಾಕ್ಷಿಯಾಗಿದೆ.

ಅಧ್ಯಾಯ–೫

# ಉಪಸಂಹಾರ

ಐವತ್ತರ ದಶಕದಲ್ಲಿ ತ್ರಿವೇಣಿಯವರು ಸಾಹಿತ್ಯ ಕ್ಷೇತ್ರವನ್ನು ಪ್ರವೇಶಿಸಿದಾಗ ಅವರ ಮುಂದಿದ್ದ ಸಾಹಿತ್ಯಿಕ ಮಾದರಿಗೆ ಅನುಗುಣವಾಗಿ ತಮ್ಮ ಸೃಜನಶೀಲ ಶಕ್ತಿ ಹಾಗೂ ವಿಶಿಷ್ಟ ಅಭಿವ್ಯಕ್ತಿ ಶೈಲಿಯನ್ನು ರೂಪಿಸಿಕೊಂಡರು. ಆ ಮಾದರಿಗಳೆಂದರೆ ಅ.ನ.ಕೃ., ತ.ರಾ.ಸು., ಕೃಷ್ಣಮೂರ್ತಿ ಪುರಾಣಿಕ ಮುಂತಾದವರ ವಾಸ್ತವ ಮಾರ್ಗ ಹಾಗೂ ಪ್ರಗತಿಶೀಲ ಧೋರಣೆಗಳೇ ಆಗಿದೆ. ಅಲ್ಲದೆ ಆ ಕಾಲದಲ್ಲಿ ಕಾದಂಬರಿ ಮಾಧ್ಯಮದ ಜನಪ್ರಿಯತೆಗೆ ಕಾರಣವಾದ ಅಂಶಗಳನ್ನು ತ್ರಿವೇಣಿ ಅನುಸರಿಸಿದರು. ಸುಶಿಕ್ಷಿತ ಮತ್ತು ಮಧ್ಯಮವರ್ಗದ ಜನರ ಭಾಷೆಯಾದ ಶಿಷ್ಟ ಕನ್ನಡದ ಬಳಕೆ, ನಗರೀಕೃತ ಮಧ್ಯಮ ವರ್ಗಗಳ ಅನುಭವಗಳನ್ನು ಒಳಗೊಂಡ ಹಾಗೂ ಚುರುಕಾದ ಸಂಭಾಷಣೆಗಳಿಂದ ಕೂಡಿದ ಬರಹ, ಓದುಗರ ವೈಚಾರಿಕತೆ ಹಾಗೂ ಭಾವನಾತ್ಮಕ ವ್ಯಕ್ತಿತ್ವವನ್ನು ತಮ್ಮ ಲಕ್ಷ್ಯವಾಗಿಸಿಕೊಂಡು, ಕಾದಂಬರಿಗಳನ್ನು ರಚಿಸಿದರು.

ಇವರ ಬಹುತೇಕ ಕೃತಿಗಳ ಮುಖ್ಯ ಕಾಳಜಿ ಹೆಣ್ಣು ಹಾಗೂ ಅವಳ ಸಮಸ್ಯೆಗಳೇ ಆಗಿದ್ದವು. ಕೇಂದ್ರದಲ್ಲಿರುವ ಹೆಣ್ಣಿನ ಬದುಕು, ಪ್ರೀತಿ ಪ್ರಣಯ, ದಾಂಪತ್ಯ ಜೀವನ ಕುಟುಂಬ ಇವುಗಳಿಗೆ ಸಂಬಂಧಿಸಿದಂತೆ ಸ್ತ್ರೀಯ ಅಪೇಕ್ಷೆ ನಿರೀಕ್ಷೆಗಳು ಮತ್ತು ಅನುಭವಗಳ ಸುತ್ತ ಅವರ ಎಲ್ಲಾ ಕೃತಿಗಳು ಹೆಣೆಯಲ್ಪಟ್ಟಿವೆ. ಆದ್ದರಿಂದಲೇ ಇವರ ಸಾಹಿತ್ಯವನ್ನು ಕುರಿತು 'ಕೌಟುಂಬಿಕ ಸಾಹಿತ್ಯ' ವೆಂದು ವಿಮರ್ಶಕರು ನಿರ್ಣಯಿಸಿದ್ದಾರೆ. ಆದರೆ ತಮ್ಮ ಅನುಭವಗಳು ಬಂದ ಬದುಕನ್ನಷ್ಟೇ ತಮಗೆ ಚಿತ್ರಿಸಿದ್ದರೂ, ಚೌಕಟ್ಟಿನಲ್ಲಿಯೇ ಅವರು ಸಾಧಿಸಿದ ವೈವಿಧ್ಯತೆ ಮತ್ತು ಜೀವನ ವಿಮರ್ಶೆಗಳು ಅದ್ಭುತವಾಗಿದೆ. ಇವರ ಸಾಹಿತ್ಯ ಅನುಭವ ಸೀಮಿತವಾಗುವುದಿಲ್ಲ. ಇವರು ಮನೆ, ವಿವಾಹ ಕುಟುಂಬ ಈ ವ್ಯವಸ್ಥೆಯನ್ನು ಅನುಮೋದಿಸುತ್ತಲೇ ವ್ಯವಸ್ಥೆಯಲ್ಲಿ ಸ್ತ್ರೀಗೆ ಸಮಾನ ಸ್ಥಾನವಿರಬೇಕೆಂದು ಮತ್ತು ಅವಳಿಗೂ ಆಯ್ಕೆಯ ಸ್ವಾತಂತ್ರ್ಯವಿರಬೇಕೆಂದು ಪ್ರಬಲವಾಗಿ ವಾದಿಸುತ್ತಾರೆ. ಪ್ರತಿಯೊಂದು ಕಾದಂಬರಿಯಲ್ಲಿಯೂ ಪುರುಷರಿಂದ ಸ್ತ್ರೀಯರಿಗೆ ಆಗುತ್ತಿರುವ ಶೋಷಣೆಯ ವಿವಿಧ ಕರಾಳ ಮುಖಗಳನ್ನು ಪರಿಣಾಮಕಾರಿಯಾಗಿ ಚಿತ್ರಿಸುತ್ತಾರೆ. ಜೊತೆಗೆ ಸ್ತ್ರೀಪರ ವೈಚಾರಿಕ ನಿಲುವುಗಳನ್ನು ವಿಶಿಷ್ಟ ಸ್ತ್ರೀಪಾತ್ರಗಳ ಮೂಲಕ ಮಂಡಿಸುತ್ತಾರೆ. "ಅವುಗಳೆಂದರೆ

ಸ್ತ್ರೀಯರಿಗೆ ವಿದ್ಯಾಭ್ಯಾಸ ಅನಗತ್ಯವೆಂದು ಭಾವನೆಗೆ ಪ್ರತಿಯಾಗಿ ಶೋಷಣೆಯಿಂದ ಪಾರಾಗಲು ಸ್ವತಂತ್ರ ವ್ಯಕ್ತಿತ್ವ ರೂಪಿಸಿಕೊಳ್ಳಲು ಹೆಣ್ಣಿಗೆ ವಿದ್ಯೆಯ ಅಗತ್ಯವಿದೆ ಎಂಬುದನ್ನು ಅನೇಕ ಸ್ತ್ರೀಪಾತ್ರಗಳ ಮೂಲಕ ದೃಢವಾಗಿ ಪ್ರತಿಪಾದಿಸಿದ್ದಾರೆ. ೨. ವಿವಾಹ ವ್ಯವಸ್ಥೆಯಲ್ಲಿ ತಮ್ಮ ಬಾಲ ಸಂಗಾತಿಯನ್ನು ಆರಿಸುವುದರ ಹಕ್ಕು ಸ್ತ್ರೀಯರಿಗೆ ಇಲ್ಲದಿರುವುದನ್ನು ವಿರೋಧಿಸುತ್ತಾರೆ. ಇವರ ಅನೇಕ ನಾಯಕಿಯರು ತಮಗೆ ಆಯ್ಕೆಯ ಸ್ವಾತಂತ್ರ್ಯವಿದೆ ಎಂಬುದನ್ನು ಪ್ರತಿಪಾದಿಸುವ ವ್ಯಕ್ತಿತ್ವ ಉಳ್ಳವರು.

ಸ್ತ್ರೀಯರನ್ನು ಕೇವಲ ಭೋಗದ ವಸ್ತುಗಳು ಹಾಗೂ ಅವರ ಬಾಳು ಸಂಪೂರ್ಣವಾಗಿ ಗಂಡನ ಸೇವೆಗಾಗಿಯೇ ಎಂಬ ಭಾವನೆಯನ್ನು ಹಾಗೂ ಗಂಡು ಹೆಣ್ಣಿನ ಸಂಬಂಧದಲ್ಲಿನ ಸಂಪ್ರದಾಯಿಕ ದ್ವಿಸ್ತರ ನ್ಯಾಯನೀತಿಗಳನ್ನು ತ್ರಿವೇಣಿ ಅಲ್ಲಗಳೆಯುತ್ತಾರೆ. ಸ್ತ್ರೀಪರ ಸಮರ್ಥನೆ ಅನೇಕ ಹೆಣ್ಣು ಪಾತ್ರಗಳಲ್ಲಿ ಕಾಣಬಹುದು.

ಹೆಣ್ಣಿನ ಬಾಳು ಹಸನಾಗುವುದು ಗಂಡಿನಿಂದ ಮಾತ್ರ ಎಂಬ ಭಾವನೆಗಳಿಗೆ ಪ್ರತಿಯಾಗಿ ಗಂಡಿನ ಬಾಳನ್ನು ರೂಪಿಸುವಲ್ಲಿ ಹೆಣ್ಣಿನ ಪಾತ್ರವೇ ಮಹತ್ವವಾಗಿದೆ ಎಂಬುದನ್ನು ಅವರ ಅನೇಕ ಕಾದಂಬರಿಗಳ ಸ್ತ್ರೀಪಾತ್ರಗಳಲ್ಲಿ ಕಾಣಬಹುದು. ಉದಾಹರಣೆಗೆ 'ತಾವರೆ ಕೊಳದ ರತ್ನ'.

ವಿವಾಹಪೂರ್ವ ಹಾಗೂ ವಿವಾಹೇತರ ಸಂಬಂಧಗಳಲ್ಲಿ ಸಮಾಜ ಸಂಬಂಧದಲ್ಲಿ ಸಮಾಜ ಹೆಣ್ಣಿಗೆ ಮಾತ್ರ ಹೊರಿಸಿರುವ ನೈತಿಕ ವಿಧಿ ನಿಷೇಧಗಳನ್ನು ವಿರೋಧಿಸುವ ಕುರಿತು ಅನೇಕ ಕೃತಿಗಳಲ್ಲಿ ಅವನ್ನು ಪ್ರಶ್ನಿಸಿದ್ದಾರೆ. ಅಲ್ಲದೆ ಹೆಣ್ಣು ಯಾವ ಸಂದರ್ಭದಲ್ಲಿ ನೈತಿಕ ಗೆರೆಯನ್ನು ದಾಟಿದಳು ಎಂಬುದನ್ನು ಅರಿಯದೆ ಅವಳಿಗೆ ಅಕ್ಷಮ್ಯ ಎಂದು ಅವಳನ್ನು ಶಿಕ್ಷಿಸುವುದು ಸರಿಯಲ್ಲ ಎಂಬುದನ್ನು ಅನೇಕ ಸ್ತ್ರೀ ಪಾತ್ರಗಲ ಮೂಲಕ ಸಮರ್ಥಿಸಿದ್ದಾರೆ.

ಒಟ್ಟಿನಲ್ಲಿ ಸ್ತ್ರೀಯೊಬ್ಬಳು ಗೃಹಿಣಿಯಾಗಿರಲಿ ಪ್ರೇಮಿಯಾಗಿರಲಿ ಅಥವಾ ತಾಯಿ–ಮಗಳಾಗಿರಲಿ, ಅವಳಿಗೆ ಪ್ರೀತಿ ಸ್ನೇಹ ಮತ್ತು ಗೌರವ ಇವು ದೊರಕಲೇ ಬೇಕು ಎಂದು ತ್ರಿವೇಣಿ ಅತ್ಯಂತ ಕಾಳಜಿಯಿಂದ ಸಮಾಜವನ್ನು ಅಗ್ರಹಿಸುತ್ತಾರೆ. ಅರ್ಥಾತ್, ತ್ರಿವೇಣಿಯವರ ಆದರ್ಶ ಕುಟುಂಬ ಮಾತ್ರವಲ್ಲ, ಪತಿಪತ್ನಿಯರಿಬ್ಬರಿಗೂ ಸಮಾನ ಹಕ್ಕು, ಬಾಧ್ಯತೆಗಳ ಮತ್ತು ಜವಾಬ್ದಾರಿಗಳಿರುವ ಆದರ್ಶ ಕುಟುಂಬವನ್ನು ಮೆಚ್ಚುತ್ತಾರೆ. ಉದಾಹರಣೆಗೆ ಕೀಲುಗೊಂಬೆಯಲ್ಲಿ ಬರುವ 'ಮಧುರವಾಣಿಯ ಕುಟುಂಬ'.

ಕನ್ನಡ ಕಾದಂಬರಿ ಪ್ರಪಂಚಕ್ಕೆ ತ್ರಿವೇಣಿಯವರು ಹೊಸ ಅನುಭವಗಳನ್ನು ನೂತನ ಭಾವನ ಕ್ರಮಗಳನ್ನು ಪರಿಚಯಿಸಿದರು. ಅವರು ಕನ್ನಡದ ಪ್ರಥಮ ಲೇಖಕಿಯಲ್ಲದಿದ್ದರೂ ಅಪಾರ ಓದುಗ ವೃಂದವನ್ನು ಪಡೆದಿರಿವ ಪ್ರಥಮ ಲೇಖಕಿ ಎನ್ನಬಹುದು. ತಮ್ಮ ಸರಳ ಹಾಗೂ ನೇರ ನಿರೂಪಣೆಯಿಂದ ಅವರು ಪುರುಷ ಪ್ರಧಾನ ಸಮಾಜದಲ್ಲಿ ಸ್ತ್ರೀಯಾಗಿ ಬದುಕುವುದೆಂದರೆ ಏನೆಂದು ಓದುಗರಿಗೆ ಮನಗಾಣಿಸಿದರು. ತಮ್ಮ ಪ್ರತಿಯೊಂದು ಕಾದಂಬರಿಯಲ್ಲಿ ಮತ್ತು ಸಣ್ಣಕತೆಯಲ್ಲಿ, ಪತ್ನಿಯಾಗಿ, ಪ್ರೇಮಿಯಾಗಿ, ಬಾಲವಿಧವೆಯಾಗಿ, ಸ್ತ್ರೀಯು ಅನುಭವಿಸುವ ಅಪೇಕ್ಷೆ-ನಿರೀಕ್ಷೆಗಳನ್ನು ಆಸೆ-ನಿರಾಸೆಗಳನ್ನು ಮತ್ತು ನೋವು ನಲಿವುಗಳನ್ನು ತ್ರಿವೇಣಿಯಷ್ಟೇ ಆಪ್ತವಾಗಿ ಪರಿಣಾಮಕಾರಿಯಾಗಿ ಬೇರೆ ಯಾರು ಲೇಖಕಿಯೂ ಅಭಿವ್ಯಕ್ತಿಗೊಳಿಸಿಲ್ಲವೆನ್ನಬಹುದು.

ಎಲ್ಲದಕ್ಕಿಂತಲೂ ಮುಖ್ಯವಾಗಿ, ತ್ರಿವೇಣಿಯವರು ಮೊದಲಬಾರಿಗೆ ಮನೋವೈಜ್ಞಾನಿಕ ಕಾದಂಬರಿಗಳನ್ನು ಮನೋವಿಕಲ್ಪಕ್ಕೆ ಒಳಗಾದವರ ಬಗ್ಗೆಯೇ ಬರೆದ ಕಾದಂಬರಿಗಳನ್ನು ಕನ್ನಡ ಓದುಗರಿಗೆ ಪರಿಚಯಿಸಿದರು. ಮತ್ತು ಅವನ್ನು ಜನಪ್ರಿಯಗೊಳಿಸಿದರು. ನಾಲ್ಕು ಕಾದಂಬರಿಗಳು ಮತ್ತು ಅನೇಕ ಕತೆಗಳ ಮೂಲಕ ಅಲ್ಲಿಯವರೆಗೂ ಓದುಗರಿಗೆ ಅಜ್ಞಾತವಾಗಿದ್ಧ ಒಂದು ಹೊಸ ಲೋಕವನ್ನೇ ಓದುಗರ ಮುಂದಿಟ್ಟರು. ಇಲ್ಲಿಯೂ ಸಹ ಈ ಸಾಮಾಜಿಕ ಕೌಟುಂಬಿಕ ವ್ಯವಸ್ಥೆ ಸ್ತ್ರೀ ಈ ಲೋಕದ ಜನರು, ಅಪ್ರಜ್ಞಾಪೂರ್ವಕವಾಗಿ, [illegible] ವಿರುದ್ಧ ಹೇರಿರುವ ನಿರ್ಬಧಗಳಿಂದಾಗಿ ಸ್ತ್ರೀಯ ಹೆಚ್ಚು ಮನೋರೋಗಿಗಳಾಗುತ್ತಾರೆ ಎಂಬುವುದರ ಕಡೆಗೆ ಅವರು ಗಮನ ಸೆಳೆದಿದ್ದಾರೆ. ಇದಕ್ಕೆ 'ಶರಪಂಜರ' ಕಥೆಯೇ ಉದಾಹರಣೆ.

ಲೇಖಕಿಯರು ಬಹಳ ಕಡಿಮೆ ಇದ್ದ ಕಾಲದಲ್ಲಿ ತ್ರಿವೇಣಿಯವರು ತಮ್ಮ ಸಾಹಿತ್ಯಸೃಷ್ಟಿಯನ್ನು ಪ್ರಾರಂಭಿಸಿದರು. ಆಗ ಲೇಖಕರು, ವಿಮರ್ಶಕರು, ಮತ್ತು ಓದುಗರು ಎಲ್ಲರೂ ಲೇಖಕಿಯರನ್ನು ಮತ್ತು ಅವರ ಸಾಹಿತ್ಯವನ್ನು ನಿಕೃಷ್ಟವಾಗಿ ಕಾಣುವ ಕಾಲವಾಗಿತ್ತು. ಪ್ರಕಾಶಕರೂ ಕೂಡ ಅಂದಿನ ದಿನಗಳಲ್ಲಿ ಸ್ತ್ರೀಯರ ಕತೆ-ಕಾದಂಬರಿಗಳನ್ನು ಪ್ರಕಟಿಸಲು ಮುಂದೆ ಬರುತ್ತಿರಲಿಲ್ಲ. ಇಂತಹ ಕಠಿಣ ಹಾಗೂ ಪ್ರತಿಕೂಲ ವಾತಾವರಣದಲ್ಲಿಯೂ ತ್ರಿವೇಣಿಯವರು ತಮ್ಮ ಅದ್ಭುತ ಪ್ರತಿಭೆ ಹಾಗು ಕಲಾವಂತಿಕೆ ಸ್ತ್ರೀಪರ ನಿಲುವು ಮತ್ತು ಸ್ತ್ರೀ ಪರವಾದ ಕಾಳಜಿಗಳಿಂದ ತಮ್ಮ ಸಾಹಿತ್ಯ ರಚನೆ ಮಾಡಿದ್ದು ಪ್ರಶಂಸನೀಯ. ಅದೇ ನಿಲುವನ್ನು ತಮ್ಮ ಅಲ್ಪಕಾಲಿಕ ಬದುಕಿನುದ್ದಕ್ಕೂ ಉಳಿಸಿಕೊಂಡರು. ಅವರ ಕೊನೆಯ ಕಾದಂಬರಿ ಹೊಸ ಬರುವಷ್ಟರಲ್ಲಿ ಅವರು ತಮ್ಮ ಕೃತಿಗಳ ಮೂಲಕ ಸ್ತ್ರೀ ಸಾಹಿತ್ಯಕ್ಕೆ ಮತ್ತು ಸ್ತ್ರೀ ಪರ ನಿಲುವಿಗೆ ಓದುಗರ, ವಿಮರ್ಶಕರ

ಮಾನ್ಯತೆಯನ್ನು ಗಳಸಿಕೊಟ್ಟಿದ್ದರು. ಅವರ ಅನಂತರ ಬಂದ ಅನೇಕ ಲೇಖಕಿಯರಿಗೆ ಅವರು ರಾಜಮಾರ್ಗವನ್ನು ಕಲ್ಪಿಸಿಕೊಟ್ಟರು. ಇಂದು ಜನಪ್ರಿಯತೆಯಲ್ಲಿ ಮತ್ತು ಪ್ರಮಾಣದಲ್ಲಿ ಲೇಖಕಿಯರ ಕಾದಂಬರಿಗಳು ಹೆಚ್ಚಿರುವುದಕ್ಕೆ ಕಾರಣ ತ್ರಿವೇಣಿಯವರು ನಿರ್ಮಿಸಿದ ಕಾದಂಬರಿ ಪರಂಪರೆ ಎಂದರೆ ಅತಿಶಯೋಕ್ತಿಯಲ್ಲ.

# ಆಧಾರ ಗ್ರಂಥಗಳು


ತ್ರಿವೇಣಿ : ಸಂ. ಗಾಯತ್ರಿ ಎನ್. ೧೯೮೯ ಜಾಗೃತಿ ಪ್ರಕಾಶನ, ಬೆಂಗಳೂರು.

ಮಹಿಳೆ ಮತ್ತು ಕನ್ನಡ ಸಾಹಿತ್ಯ : ಸಂ. ಜಿ.ಎಸ್. ಶಿವರುದ್ರಪ್ಪ, ೧೯೮೯, ಪ್ರಸಾರಾಂಗ, ಬೆಂ.ವಿ.ವಿ., ಬೆಂಗಳೂರು.

ಮಹಿಳಾ ಸಾಹಿತ್ಯ ಚರಿತ್ರೆ : ಡಾ. ಎಚ್.ಎಸ್. ಶ್ರೀಮತಿ

ಸ್ತ್ರೀವಾದಿ ಸಾಹಿತ್ಯ ವಿಮರ್ಶೆ : ಸಂ. ತೇಜಸ್ವಿನಿ ನಿರಂಜನ, ಸೀಮಂತಿನಿ ನಿರಂಜನ, ೧೯೯೪ ಕನ್ನಡ ಸಂಘ, ಕ್ರೈಸ್ತ ಕಾಲೇಜು, ಬೆಂಗಳೂರು.

ಕನ್ನಡ ಕಥನ ಸಾಹಿತ್ಯ : ಕಾದಂಬರಿ ಜಿ.ಎಸ್. ಅಮೂರ, ೧೯೯೪.

ಸ್ತ್ರೀವಾದಿ ಪ್ರವೇಶಿಕೆ : ಸಂ. ಬಿ.ಎನ್. ಸಮಿತ್ರಬಾಯಿ, ಎನ್. ಗಾಯತ್ರಿ, ೧೯೯೫, ಕರ್ನಾಟಕ ಲೇಖಕಿಯರ ಸಂಘ, ಬೆಂಗಳೂರು

ಮಹಿಳೆ ಸಾಹಿತ್ಯ ಸಮಾಜ : ಡಾ ವಿಜಯದಬ್ಬೆ, ೧೯೮೯, ರಚನಾ ಪ್ರಕಾಶನ, ಮೈಸೂರು.

ಸಾಮಾನ್ಯರಿಗೆ ಸಾಹಿತ್ಯ ಚರಿತ್ರೆ : ಸಂಪುಟ.೧೦, ಹೊಸಗನ್ನಡ ಸಾಹಿತ್ಯ: ಎಲ್.ಎಸ್. ಶೇಷಗಿರಿರಾವ್ ೧೯೭೫, ಪ್ರಕಟಣಾ ಮತ್ತು ಪ್ರಚಾರೋಪನ್ಯಾಸ ವಿಭಾಗ, ಪ್ರಸಾರಾಂಗ, ಬೆಂ.ವಿ.ವಿ., ಬೆಂಗಳೂರು.

